# ಕನ್ನಡ ವಿಶ್ವವಿದ್ಯಾಲಯ, ಹಂಪಿ



ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ
ಸಂಶೋಧನಾ ಪ್ರಬಂಧ

# ಕುವೆಂಪು ಕಾದಂಬರಿಗಳಲ್ಲಿ ಬಾಲ ಪ್ರಪಂಚ

**ಸತೀಶ ಜಿ.ಸಿ**
ಸಂಶೋಧನಾ ವಿದ್ಯಾರ್ಥಿ
ನೋಂದಣಿ ಸಂಖ್ಯೆ : ಕೆ.ವಿ.ಎಂ.ಬಿ.ಕೆ.ಎಸ್ – ೦೦೫೪೫ – ೨೦೧೨

೨೦೧೧-೨೦೧೨

**ಮಾರ್ಗದರ್ಶಕರು**

**ಡಾ. ಕೆ. ವಿ. ಚಂದ್ರಣ್ಣಗೌಡ**
ಎಂ.ಎ ಎಲ್.ಎಲ್.ಬಿ. ಪಿ.ಹೆಚ್.ಡಿ
ಉಪಪ್ರಾಚಾರ್ಯರು ಹಾಗೂ ಮುಖ್ಯಸ್ಥರು
ಕನ್ನಡ ವಿಭಾಗ, ವಿ.ವಿ.ಪುರಂ ಸಂಜೆ ಕಾಲೇಜು,
ಕೆ.ಆರ್ ರಸ್ತೆ, ಬೆಂಗಳೂರು-೧೪

**ಕಾವ್ಯಮಂಡಲ**
**ಬೆಂಗಳೂರು**

973

# ದೃಢೀಕರಣ ಪತ್ರ

**ಸತೀಶ.ಜಿ.ಸಿ** ಇವರು ಎಂ.ಫಿಲ್ ಪದವಿಗಾಗಿ **"ಕುವೆಂಪು ಕಾದಂಬರಿಗಳಲ್ಲಿ ಬಾಲ ಪ್ರಪಂಚ"** ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: 29/6/12
ಸ್ಥಳ: ಬೆಂಗಳೂರು

**ಮಾರ್ಗದರ್ಶಕರು**

**ಡಾ. ಕೆ. ವಿ. ಚಂದ್ರಣ್ಣಗೌಡ**
ಎಂ.ಎ ಎಲ್.ಎಲ್.ಬಿ. ಪಿ.ಹೆಚ್.ಡಿ
ಉಪಪ್ರಾಚಾರ್ಯರು ಹಾಗೂ ಮುಖ್ಯಸ್ಥರು
ಕನ್ನಡ ವಿಭಾಗ, ವಿ.ವಿ.ಪುರಂ ಸಂಜೆ ಕಾಲೇಜು,
ಕೆ.ಆರ್ ರಸ್ತೆ, ಬೆಂಗಳೂರು–೧೪

# ಪ್ರಮಾಣ ಪತ್ರ

**"ಕುವೆಂಪು ಕಾದಂಬರಿಗಳಲ್ಲಿ ಬಾಲಪ್ರಪಂಚ"** ಎಂಬ ನಿಬಂಧವನ್ನು ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು **ಡಾ. ಕೆ.ವಿ ಚಂದ್ರಣ್ಣಗೌಡ**ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದುವರೆವಿಗೂ ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲವೆಂದು ಘೋಷಿಸುತ್ತೇನೆ.

ದಿನಾಂಕ: 29/6/12
ಸ್ಥಳ: ಬೆಂಗಳೂರು

ಸತೀಶ ಜೆ.ಸಿ
ಸಂಶೋಧನಾ ವಿದ್ಯಾರ್ಥಿ
ಕೆ.ವಿ.ಎಂ/ಬಿ.ಕೆ.ಎಸ್೦೦೫೪೫

# ಪರಿವಿಡಿ

# ಪೀಠಿಕೆ

ಹೊಸಗನ್ನಡ ಸಾಹಿತ್ಯದ ಆರಂಭ ಘಟ್ಟದಲ್ಲಿ, ನಮ್ಮ ದೇಶ ಮತ್ತು ನಾಡುಗಳಲ್ಲಿ ಸಾಮಾಜಿಕ ಕ್ರಾಂತಿಗಳು ಜರುಗುತ್ತಿದ್ದ ಕಾಲದಲ್ಲಿ ಇಂಗ್ಲೀಷ್ ಪ್ರಭುತ್ವ, ಸಾಹಿತ್ಯ – ಸಂಸ್ಕೃತಿಗಳಿಂದ ಪ್ರೇರಣೆಗೊಂಡು ನಮ್ಮ ದೇಶೀಯ ಭಾಷೆ, ಸಾಹಿತ್ಯಗಳು ಅವಸ್ಥಾಂತರ ಹೊಂದಿದವು. ಇದರಿಂದಾಗಿ ಜನರನ್ನು ನವ ನವೀನತರವಾದ ಪ್ರಜ್ಞೆಯೊಂದು ಆವರಿಸಿತು. ಆರಂಭದ ಅರೆಪ್ರಜ್ಞಾವಸ್ಥೆಯ ಜಾಡ್ಯ ತೊಲಗಿ, ಎಲ್ಲವನ್ನು ಒರೆಗಲ್ಲಿಗೆ ಉಜ್ಜಿ ನೋಡುವ ಮನಸ್ಥಿತಿ ಬೆಳೆಯತೊಡಗಿತು.

ಈ ಕಾಲಘಟ್ಟದಲ್ಲಿ ಕನ್ನಡದ ಷೇಕ್ಸ್‌ಪಿಯರ್ ಆಗಿ ಕುವೆಂಪುರವರು ಅವತರಿಸಿ, ಸಾಹಿತ್ಯ ಕೃಷಿಯ ಮೂಲಕ ಜೀವನದ ನಿಜವಾದ ಅರ್ಥ ಮತ್ತು ಶಾಶ್ವತವಾದ ಮೌಲ್ಯಗಳನ್ನು ಶೋಧಿಸುತ್ತಾ, ಎಲ್ಲ ಕಟ್ಟುಪಾಡುಗಳನ್ನೂ ಮೀರಿದರು. “ನೂರು ಮತದ ಹೊಟ್ಟ ತೂರಿ ಎಲ್ಲ ತತ್ವದೆಲ್ಲೆ ಮೀರಿ ನಿರ್ದಿಗಂತವಾಗಿ ಏರಿ” ನಿಂತವರು. ಕುವೆಂಪು ಕೇವಲ ಕವಿಯಾಗಿರದೇ ಸಾಹಿತಿಯಾಗಿ ಮಾತ್ರವಲ್ಲದೇ ಕನ್ನಡ ಸಾರಸ್ವತ ಲೋಕದ ಧೀಮಂತ ನಾಯಕರಾಗಿದ್ದಾರೆ. ಸಾಮಾಜಿಕ ಬದಲಾವಣೆಯ ಹರಿಕಾರ ರಾಗಿದ್ದಾರೆ. ನೀತಿರಹಿತವಾದ ಮೌಲ್ಯರಹಿತವಾದ ಡಾಂಭಿಕತೆಯನ್ನು ಪ್ರತಿರೋಧಿಸಿದವರಾಗಿದ್ದಾರೆ. ಮಾನವನ ಹೃದಯವನ್ನು ಉದಾತ್ತಗೊಳಿಸುವಂತಹ ಶಕ್ತಿ ಅವರ ಲೇಖನಿಗಿತ್ತು. “ಮತದ ಹೆಸರಿನಲ್ಲಿ, ದೇವರ ಹೆಸರಿನಲ್ಲಿ ಅಸಂಖ್ಯಾತ ಮೂಢ ಸಂಪ್ರದಾಯಗಳು, ಅರ್ಥಶೂನ್ಯವೂ, ವಿಚಾರರಹಿತವೂ ಆದ ಹಲವು ಶಾಸ್ತ್ರ ಪರಂಪರೆಗಳು ಬೆಳೆದು, ದೇಶದ ಬಹುಭಾಗ ಜನರನ್ನು ಅಜ್ಞಾನದ ದಾಸ್ಯದ ಕೂಪಕ್ಕೆ, ಅಸ್ಪೃಶ್ಯತೆಯ ಕಗ್ಗತ್ತಲಿಗೆ ನೂಕಿದವು” ಎಂದು ಜನರಲ್ಲಿ ವಿಚಾರ ಕ್ರಾಂತಿಗೆ ಆಹ್ವಾನ ನೀಡಿದರು.

‘ಗುಡಿ, ಚರ್ಚು, ಮಸೀದಿಗಳನ್ನು ಬಿಟ್ಟು ಹೊರ ಬನ್ನಿ’ ಎಂದು ನಿಷ್ಠುರವಾದ ಕರೆಯನ್ನು ನೀಡಿ, ಧರ್ಮಾಂಧತೆಯ ಮೌಢ್ಯವನ್ನು ಬೇರು ಸಮೇತ ಕಿತ್ತುಹಾಕಲು ಪ್ರಯತ್ನಿಸಿದರು. ಕುವೆಂಪುರವರು ಜಾತಿ–ಮತ, ಪುರೋಹಿತಶಾಹಿ ಸಂಸ್ಕೃತಿಯನ್ನು ವಿರೋಧಿಸಿ, ಯಜಮಾನಿಕೆಯ ಪ್ರತೀಕವಾದ ಮಠ ಮಾನ್ಯಗಳು, ದೇವರು ದೇವಸ್ಥಾನಗಳನ್ನು ಮೀರಿ ನಿಲ್ಲುವ ಚಿಂತನೆ ಬೆಳೆಸಿದರು. ಇವರ ಶೂದ್ರತಪಸ್ವಿ ನಾಟಕವಂತೂ ಭಾರತೀಯ ವೈದಿಕ ಮೌಲ್ಯಗಳನ್ನೇ ಅಲುಗಾಡಿಸಿದೆ. ವಾಲ್ಮೀಕಿ ರಾಮಾಯಣದ ಎಲ್ಲ ಪಾತ್ರಗಳು ಕುವೆಂಪುರವರ ‘ಶ್ರೀರಾಮಾಯಣ ದರ್ಶನಂ’ನಲ್ಲಿ ಹೊಸಹುಟ್ಟನ್ನು ಪಡೆದಿವೆ. ಶ್ವೇತ ರಕ್ತತೆಯ ಗುಣವನ್ನು ಅಳವಡಿಸಿ, ಪಾಪ ಕರ್ಮವನ್ನು ತೊಳೆಯುವ ಒಂದು ಹೊಸ ಯಜ್ಞವನ್ನು, ಕಳಂಕಿತ ಪಾತ್ರಗಳಿಗಾಗಿ ಕುವೆಂಪು ಕೈಗೊಂಡರು.

**ಕಾದಂಬರಿ:**

ಕಾದಂಬರಿ ಅತ್ಯಂತ ಸ್ವತಂತ್ರವಾದ ಮತ್ತು ಸ್ವಚ್ಛಂದವಾದ ಸಾಹಿತ್ಯ ಪ್ರಕಾರ. ಕಾದಂಬರಿಯನ್ನು 'ಕರತಲ ರಂಗಭೂಮಿ' ಎಂತಲೂ ಕರೆಯುತ್ತಾರೆ. 'ಶಾಯಿ, ಕಾಗದ ಮತ್ತು ಕಾಲವಿದ್ದರೆ ಯಾರು ಬೇಕಾದರೂ ಕಾದಂಬರಿಯನ್ನು ಬರೆಯಬಹುದು' ಎನ್ನುವ ಮಾತು ಇದರ ಸರಳತೆಗೆ ಹೇಳಿರುವುದಾಗಿದೆ. ಕಾದಂಬರಿ ಎಂದರೆ ಘಟನೆಗಳು ಮತ್ತು ಕ್ರಿಯೆಯೊಡನೆ ಅನುಭವಿಸಿದ ಮತ್ತು ಮಾಡಿದ ಸಂಗತಿಗಳು. ಇವು ಜನಜೀವನದ ಮಧ್ಯೆ ಸುಳಿದು ಪಾತ್ರಗಳಾಗಿರುತ್ತವೆ. ಕಾದಂಬರಿಯಲ್ಲಿನ ಪಾತ್ರಗಳ ಸಂಭಾಷಣಾ ಶೈಲಿ, ಜೀವನದ ಬಗೆಗಿನ ಒಂದು ನಿಶ್ಚಿತ ದೃಷ್ಟಿ, ಬದುಕಿನ ಕೆಲವು ಸಮಸ್ಯೆಗಳು ಅವಶ್ಯಕವಾಗಿ ಇಲ್ಲಿ ನಿರೂಪಿತವಾಗುತ್ತವೆ. ಕಾದಂಬರಿಯು ಪ್ರಮುಖವಾಗಿ ಓದು ಮಾಧ್ಯಮವಾಗಿರುವುದರಿಂದ ನಾಟಕಕ್ಕೆ ಬೇಕಾಗಿರುವ ರಂಗ ಪರಿಕರ, ಪ್ರೇಕ್ಷಕ, ಅಭಿನಯಗಳ ಅವಶ್ಯಕತೆ ಇಲ್ಲ. ವಸ್ತುವನ್ನು ಸಂಬದ್ಧವಾಗಿ ಪರಿಣಾಮಕಾರಿಯಾಗಿ ನಿರೂಪಿಸುವ ಶಕ್ತಿ ಕಾದಂಬರಿಕಾರನಿಗಿದ್ದರೆ ಸಾಕು. ವಿಶ್ವ ಸಾಹಿತ್ಯದಲ್ಲಿ ಕಾದಂಬರಿಗೆ ಅದರದ್ದೇ ಆದ ವಿಶೇಷ ಸ್ಥಾನವಿದೆ. ಟಾಲ್‌ಸ್ಟಾಯ್‌ರವರ 'ಅನ್ನಾ ಕರೆನಿನಾ', 'ವಾರ್ ಅಂಡ್ ಪೀಸ್', ಚಿನುವಾ ಅಚಿಬೆಯವರ 'ಥಿಂಗ್ಸ್ ಪಾಲ್ ಅಪಾರ್ಟ್', ವಿಭೂತಿಭೂಷಣ ಬಂದೋಪಾಧ್ಯಾಯರವರ 'ಪಥೇರ್ ಪಾಂಚಾಲಿ', ಪ್ರೇಮ್‌ಚಂದ್‌ರ 'ಗೋದಾನ', ಥಾಮಸ್ ಹಾರ್ಡಿಯವರ 'ರಿಟನ್ ಆಫ್ ದಿ ನೇಟಿವ್', ತಕಳಿ ಶಿವಶಂಕರ ಪಿಳ್ಳೈಯವರ 'ಚೆಮ್ಮೀನ್' ಮುಂತಾದವು ವಿಶ್ವದ ಕೆಲವು ಮಹಾನ್ ಕಾದಂಬರಿಗಳು. ಇವುಗಳ ಗುಂಪಿಗೆ ಕುವೆಂಪುರವರ 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳನ್ನೂ ಸೇರಿಸಬಹುದು. ಕುವೆಂಪು ಯಜಮಾನ ಸಂಸ್ಕೃತಿಯ ಪ್ರತಿನಿಧಿ ಎನ್ನುವ ಆಪಾದನೆಗೆ ಕುವೆಂಪುರವರ ಈ ಎರಡು ಕಾದಂಬರಿಗಳು ತಕ್ಕ ಉತ್ತರವನ್ನು ನೀಡುತ್ತವೆ. ಸಂಸ್ಕೃತಿಯ ಬಗೆಗಿನ ರೊಚ್ಚನ್ನು ತೀವ್ರತರವಾಗಿ ಇವುಗಳಲ್ಲಿ ಕಾಣಬಹುದು. ಪುರೋಹಿತಶಾಹಿಯ ಎಲ್ಲಾ ಮುಖವಾಡಗಳು ಇಲ್ಲಿ ಒಂದೊಂದಾಗಿ ಕಳಚಿ ಬೀಳುತ್ತವೆ. ಗೊಡ್ಡು ಬ್ರಾಹ್ಮಣ್ಯದ ಅರ್ಥಹೀನ ನಡವಳಿಕೆ ಕುಲಗೆಟ್ಟ ನಡತೆಯ ವೈಪರಿತ್ಯಗಳು ಇಲ್ಲಿ ಬಿಚ್ಚಿಕೊಳ್ಳುತ್ತವೆ. ಕಥಾನಾಯಕ ಹೂವಯ್ಯ ಬೌದ್ಧ ಧರ್ಮದಿಂದ ಪ್ರಭಾವಿತನಾಗಿದ್ದು, ಯಜಮಾನ ಸಂಸ್ಕೃತಿಯ ಎಲ್ಲಾ ಡಂಭಾಚಾರಗಳನ್ನು ಹಳಿಯುತ್ತಾನೆ; ಪ್ರತಿರೋಧಿಸುತ್ತಾನೆ. ಶೂದ್ರ ಬದುಕಿನ ಸಾಂಸ್ಕೃತಿಕ ತಲ್ಲಣಗಳು ಇಲ್ಲಿ ಅಭಿವ್ಯಕ್ತಿಗೊಂಡಿವೆ.

ಕುವೆಂಪುರವರ ಕಾದಂಬರಿಗಳಲ್ಲಿ ಯಾವುದೇ ರೀತಿಯ ನಾಗರೀಕತೆಯ ನಾಜೂಕು, ಸಂಸ್ಕೃತಿ ಹಾಗೂ ಪರಂಪರೆಗಳು ಗೋಚರಿಸದೆ, ದಟ್ಟವಾದ ಗ್ರಾಮೀಣ ಬದುಕಿನ ಎಳೆ ಎಳೆಯಾದ ಚಿತ್ರಣವಿರುತ್ತದೆ. ಅವರೇ ಹೇಳುವಂತೆ 'ಇಲ್ಲಿ ಯಾರೂ ಮುಖ್ಯರಲ್ಲ, ಹಾಗೆಯೇ ಯಾರೂ ಅಮುಖ್ಯರಲ್ಲ'. ಕಾದಂಬರಿಕಾರರ ಅಪಾರವಾದ ಜೀವನಾನುಭವ, ವಿಶಾಲವಾದ ದೃಷ್ಟಿಕೋನಗಳು ಪರಂಪರೆ,

ಸಂಪ್ರದಾಯ, ಧಾರ್ಮಿಕತೆಯ ಹೆಸರಿನಲ್ಲಿ ನಡೆಯುವ ಅನಾಚಾರಗಳನ್ನು, ಅವುಗಳಿಗೆ ನೀರೆರೆದು ಪೋಷಿಸುವ, ಮುಗ್ಧ ಜನಸಾಮಾನ್ಯರನ್ನು ಮಂಕು ಜೀವಿಗಳನ್ನಾಗಿಸಿರುವ ಪುರೋಹಿತ ವರ್ಗವನ್ನು ಸಾರಾಸಗಟಾಗಿ ಖಂಡಿಸುತ್ತವೆ. ಹೆಗ್ಗಡಿತಿ ಕಾದಂಬರಿಯ ಹೂವಯ್ಯ ಆಧುನಿಕ ಪ್ರಜ್ಞೆಯ ರೂಪಕವಾಗಿ ತಾತ್ವಿಕ ತಳಹದಿಯ ಮೇಲೆ ನಿಂತು, ವೆಂಕಪ್ಪ ಜೋಯಿಸರ ಗೊಡ್ಡು ಸಂಪ್ರದಾಯವನ್ನು, ವೈದಿಕತೆಯ ದಾಸ್ಯವನ್ನು ನೇರವಾಗಿ ವಿರೋಧಿಸುತ್ತಾನೆ.

ಹೆಗ್ಗಡಿತಿ ಕಾದಂಬರಿಯಲ್ಲಿ ಬರುವ ಕೆಳಕಾನೂರು ಅಣ್ಣಯ್ಯಗೌಡರು ಕಾನೂರಿನ ಚಂದ್ರಯ್ಯ ಗೌಡರ ಬಳಿ ಮಾಡಿದ ಸಾಲವನ್ನು ತೀರಿಸಲಾರದೆ, ತಮ್ಮ ಮನೆಯಲ್ಲಿರುವ ಸಾಮಾನುಗಳನ್ನೆಲ್ಲಾ ಗಾಡಿ ಯಲ್ಲಿ ಹೇರಿಕೊಂಡು ಅರ್ಧರಾತ್ರಿಯಲ್ಲಿ ಕದ್ದುಹೋಗಲು ಯತ್ನಿಸಿದಾಗ ಚಂದ್ರಯ್ಯಗೌಡರ ದರ್ಪ ಅವರನ್ನು ತಡೆದು ನಿಲ್ಲಿಸುತ್ತದೆ. ಇಲ್ಲಿ ಶೋಷಣೆ ಎಂಬುದು ನಿಮ್ನ ಜಾತಿಯವರಲ್ಲಿ ಮಾತ್ರವಲ್ಲದೇ ಸಜಾತಿಯವರಲ್ಲಿಯೂ ಕೂಡ ನಡೆಯುತ್ತದೆ.

ಬಂಡವಾಳಶಾಹಿಗಳ ಪಾಳೇಗಾರಿಕೆ ಸ್ವಭಾವಕ್ಕೆ ಮತ್ತೊಂದು ಉದಾಹರಣೆ ಹಳೆಪೈಕದವರಿಗೆ ದಂಡಿಗೆಯ ಹಕ್ಕು ಸಿಗದಂತೆ ಮಾಡುವುದು. ವೇದ ಕಲಿಯುವುದು ಶೂದ್ರರಿಗೆ ಹೇಗೆ ನಿಷಿದ್ಧವಾದ ಕೆಲಸವೋ ಹಾಗೆಯೇ ಸ್ವಂತ ಜಮೀನು ಮಾಡುವುದು ಹಳೆಪೈಕದವರಿಗೆ ನಿಷಿದ್ಧ ಎಂದು ಹೆಗ್ಗಡೆ ನಾಯಕರೆಲ್ಲ ತೀರ್ಮಾನ ಮಾಡುತ್ತಾರೆ. ಅಷ್ಟೇ ಅಲ್ಲದೆ ಮದುವೆ ಮುಂತಾದ ಆಚರಣೆಗಳಲ್ಲಿ ಒಕ್ಕಲಿಗ ರನ್ನು ಹಳೆಪೈಕದವರು ಅನುಸರಿಸಬಾರದು ಎಂದೂ ಕಟ್ಟಪ್ಪಣೆ ಮಾಡುತ್ತಾರೆ.

ಮಾನವೀಯತೆ, ಸಮಾನತೆ, ಸ್ವಾತಂತ್ರ, ಪ್ರೀತಿ, ಸಮತಾವಾದವನ್ನು ಬೋಧಿಸುವ ಕುವೆಂಪು ಜಾತಿ ವರ್ಗಗಳ ಸಂಘರ್ಷ ಮತ್ತು ಮತ-ಮತೀಯ ಶೋಷಣೆಗೆ ಪ್ರಬಲವಾದ ವಿರೋಧವನ್ನು ವ್ಯಕ್ತ ಪಡಿಸುತ್ತಾರೆ. ಎಲ್ಲಾ ವರ್ಗದವರ ಬದುಕು ಹಸನಾಗಿರಬೇಕು; ಸುಖವಾಗಿರಬೇಕು ಎಂದು ಅವರು ಅಪೇಕ್ಷಿಸುತ್ತಾರೆ.

ಮಾನಸಿಕ ದಾಸ್ಯದಿಂದ ಮನುಷ್ಯನನ್ನು ವಿಮುಕ್ತಗೊಳಿಸುವಲ್ಲಿ ಚಿಂತಿಸಿದ ಕುವೆಂಪುರವರನ್ನು ಬ್ರಾಹ್ಮಣವಿರೋಧಿ ಎಂದು ಆಪಾದಿಸಿದ್ದಾರೆ. ಆದರೆ ಈ ಆಪಾದನೆ ಹುರುಳಿಲ್ಲದ್ದು. ಬ್ರಾಹ್ಮಣ ವರ್ಗದ ಮೇಲೆ ಕುವೆಂಪುರವರಿಗೆ ದ್ವೇಷವಿಲ್ಲ. ಮುಖ್ಯವಾದ ತಕರಾರಿರುವುದು ಮೂಢತೆಯನ್ನು, ಅಜ್ಞಾನವನ್ನು, ಅಸಂಪ್ರದಾಯ ಪದ್ಧತಿಗಳನ್ನು ಅಮಾಯಕರಲ್ಲಿ ಪ್ರಚಾರಿಸಿ, ಸಾಮಾಜಿಕ ರೋಗವನ್ನುಂಟುಮಾಡುವ ಪುರೋಹಿತಶಾಹಿಯೊಡನೆ.

ಕುವೆಂಪುರವರ 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳನ್ನು ಮತ್ತೊಂದು ಆಯಾಮದಿಂದ ನೋಡ ಹೊರಟರೆ, ಅಲ್ಲಿನ ಪ್ರಾಣಿ, ಪಕ್ಷಿ ಸಂಕುಲ ಇತ್ಯಾದಿಯಾಗಿ ಎಲ್ಲವನ್ನು ದೂರಮಾಡಿ ನಿಂತು ನೋಡಿದಾಗ ಅಲ್ಲಿ ಕಾಣುವುದು ಬಾಲಪ್ರಪಂಚವೇ. ನಿಜವಾಗಿಯೂ ಕುವೆಂಪುರವರು ಮಕ್ಕಳ ಪಾತ್ರಗಳನ್ನು ಸೃಷ್ಟಿಸಿ ಪೋಷಿಸುವಲ್ಲಿ ಒಂದು ವಿಧದ ಪರಕಾಯ ಪ್ರವೇಶ ಮಾಡಿದ್ದಾರೆ.

# ಅಧ್ಯಾಯ ೧

# ಕುವೆಂಪು ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ಬಾಲ ಪ್ರಪಂಚ

ಕುವೆಂಪುರವರ ಕಾದಂಬರಿಗಳಾದ 'ಮಲೆಗಳಲ್ಲಿ ಮದುಮಗಳು', 'ಕಾನೂರು ಹೆಗ್ಗಡಿತಿ'ಯಲ್ಲಿ ಪ್ರತ್ಯೇಕವಾದ ಬಾಲಪ್ರಪಂಚವಿದೆ. ಕಾದಂಬರಿಯ ಓದುಗರು ಕುವೆಂಪು ನಿವೇದಿಸಿರುವ ಕಾನನ, ಪ್ರಾಣಿ ಪ್ರಪಂಚವನ್ನು ದೂರದಲ್ಲಿಟ್ಟು ನೋಡಿದರೆ ಅಲ್ಲಿ ಜಲನಿಧಿಯಾಗಿ ಕಂಡು ಬರುವುದೇ ಮಕ್ಕಳ ಇನ್ನೊಂದು ಲೋಕ (ಚಿಣ್ಣರಲೋಕ)

ಕಾನೂರು ಹೆಗ್ಗಡಿತಿ ಕಾದಂಬರಿಯಲ್ಲಿ ಮೈಸೂರಿನಿಂದ ವಿದ್ಯಾಭ್ಯಾಸ ಮುಗಿಸಿ, ಕಾನೂರಿನ ಕಡೆ ಬರುತ್ತಿದ್ದ ಹೂವಯ್ಯ ರಾಮಯ್ಯರು ತೀರ್ಥಹಳ್ಳಿಯ ಕಲ್ಲುಸಾರದ ಮೇಲೆ ನಡೆದು ಬರುವಾಗ, ಅಲ್ಲಿ ಹುಡುಗರು ಈಜಾಡುವುದನ್ನು ಹೂವಯ್ಯ ತದೇಕಚಿತ್ತತೆಯಿಂದ ನೋಡುತ್ತಾ ನಿಲ್ಲುತ್ತಾನೆ. ತಮ್ಮ ರಾಮಯ್ಯನು 'ಏನು ನೋಡುತ್ತಿದ್ದೆ ಈ ಬಿಸಿಲಿನಲ್ಲಿ' ಎಂದಾಗ, ಹೂವಯ್ಯ "ಹುಡುಗರು ಈಜುತ್ತಿದ್ದರು ಅದನ್ನು ನೋಡಿ ನಾವು ಈಜುತ್ತಿದ್ದುದನ್ನು ನೆನೆದು ಹಾಗೆ ನಿಂತುಬಿಟ್ಟೆ, ಅವರು ಈಗಲೂ ನಾವು ಆಡಿದ ಕಲ್ಲಾಟವನ್ನೇ ಆಡುತ್ತಿದ್ದಾರೆ"[೧] ಎನ್ನುತ್ತಾನೆ. ಇಲ್ಲಿ ಹೂವಯ್ಯನ ಭಾವಕೋಶ ತನ್ನ ಬಾಲ್ಯತನವನ್ನು ಪ್ರವೇಶಿಸುತ್ತದೆ. ಬಾಲ್ಯದಲ್ಲಿ ತಾವು ಆಡಿದ ಆಟ ವಿನೋದ ಲಾಸ್ಯಗಳನ್ನು ಕವಿ ಪುನಃ ಸ್ಮೃತಿಗೊಳಿಸುತ್ತಾರೆ. ಕಾದಂಬರಿಯ ಪ್ರಾರಂಭದಲ್ಲೇ ಮಕ್ಕಳ ಪ್ರಪಂಚದ ಪ್ರವೇಶ ನಡೆದಿದೆ. ಈ ಸಂದರ್ಭದಲ್ಲಿ ಗ್ರಾಮೀಣ ಮತ್ತು ಕಾನನದ ಪರಿಸರ ಬೇಗ ನವನವೀನತೆಗೆ ಬದಲಾಗುವುದಿಲ್ಲವೆಂದು ಕಲ್ಲಾಟದಂತಹ ಪ್ರಾದೇಶಿಕ ಕ್ರೀಡೆಗಳು ಸಾಕ್ಷಿ ನುಡಿಯುತ್ತವೆ. ಇದು ಉಳಿದಿರುವುದು ಮಕ್ಕಳ ಬದುಕಿನಲ್ಲಿ.

ಸೀತೆಯ ಪ್ರವೇಶಿಕೆಯನ್ನಂತೂ ಕುವೆಂಪು ಹೆಗ್ಗಡಿತಿಯಲ್ಲಿ ಅದ್ಭುತವಾಗಿ ಹೊರಮೂಡಿಸಿದ್ದಾರೆ. ತಾಯಿ ಗೌರಮ್ಮ ತನ್ನ ಮಗನಾದ ಚಿನ್ನಯ್ಯನ ಜೊತೆ ಹೂವಯ್ಯ ರಾಮಯ್ಯರು ಬರುವ ವಿಚಾರವಾಗಿ ಸಂಭಾಷಿಸುತ್ತಿರುವಾಗ ಹೂ ಗಿಡಗಳ ಪೊದೆಯಿಂದ ಅಣ್ಣಯ್ಯ ಇಲ್ಲಿ ಬಾ ಎಂಬ ಸೀತೆಯ ಧ್ವನಿ ಕೇಳುತ್ತದೆ. ತಾಯಿ ಮಕ್ಕಳಿಬ್ಬರು ತಿರುಗಿ ನೋಡಿದಾಗ ಸೀತೆಯ ಕೈಯಲ್ಲಿ ಒಂದೆರಡು ಗುಲಾಬಿ ಹೂಗಳಿರುತ್ತವೆ. ಪಕ್ಕದಲ್ಲಿ ಅವಳ ಪುಟ್ಟ ತಂಗಿ ಲಕ್ಷ್ಮಿ ಅಕ್ಕನ ಸೀತೆಯ ನಿರಿಗೆಗಳನ್ನು ಭದ್ರವಾಗಿ ಹಿಡಿದು ನಿಂತಿರುತ್ತಾಳೆ. ಕುವೆಂಪು ಬೇರೆಲ್ಲಾ ಕಡೆಯಲ್ಲಿ ಹೊಂಬಾಳೇ, ಕಲ್ಲುಸಂಪಿಗೆ ಹೂ ಇತ್ಯಾದಿ ಮಲೆನಾಡಿನ ಗಿಡ, ಮರ, ಹಕ್ಕಿ, ಹೂ-ಹಣ್ಣುಗಳನ್ನು ಪರಿಚಯಿಸುತ್ತಿದ್ದರೂ ಈ ಸಂದರ್ಭದಲ್ಲಿ ಗುಲಾಬಿ ಹೂವನ್ನು ಉಪಮೆಯಾಗಿ ಬಳಸಿದ್ದಾರೆ. ಕುವೆಂಪುರವರು ಒಂದು ಮನೋಹರವಾದ ಹೂಗಿಡ ಮತ್ತು ಹೂವಿನ ಮೂಲಕವಾಗಿ ಬಾಲೆಯಾದ ಸೀತೆಯ ಪಾತ್ರ ಪರಿಚಯ ಮಾಡಿಕೊಡುತ್ತಾರೆ. ತಂಗಿಯ ಕರೆಗೆ ಓ

ಗೊಟ್ಟು ಹೋದ ಚಿನ್ನಯ್ಯ, ಏನೆಂದು ಕೇಳಲು, ನನಗೆ ಗುಲಾಬಿ ಹೂಗಳನ್ನು ಕುಯ್ದುಕೊಡು ಎಂದು ಕೇಳುತ್ತಾಳೆ. ಚಿನ್ನಯ್ಯ 'ಯಾರಿಗೆ ಅಷ್ಟೊಂದು ಹೂವು? ನಿನಗೇನು ಮದುವೆಯೋ ಗಿದುವೆಯೋ?' ಎಂದು ನಕ್ಕನು. ಸೀತೆ ಮುನಿಸಿನಿಂದ ಕೆನ್ನೆ ಊದಿಸಿಕೊಂಡು ಬಯ್ಯುತ್ತಾಳೆ. ಚಿನ್ನಯ್ಯ ಅವಳಿಗೆ ಒಂದು ಗುದ್ದು ನೀಡಿದಾಗ "ಸೀತೆ ಮತ್ಯಾಕೆ ನೀನು ಹಾಗೆ ಹೇಳಿದ್ದು, ಯಾಕೆ ಹೇಳಿದ್ದೋ? ಇವತ್ತು ಯಾರು ಬರ್ತಾರೆ ಗೊತ್ತೇನು? ಸೀತೆಯು ಏನು ತಿಳಿಯದವಳಂತೆ ಯಾರು ಬರ್ತಾರೆ? ಎಂದಳು. ಅವಳ ಮುಖ ವಾಣಿ ಬದಲಾಯಿತು. ಯಾರು ನಿನ್ನ ಭಾವಂದಿರು ಮೈಸೂರಿನಿಂದ. ಯಾರು ರಾಮಯ್ಯ ಭಾವನೆ? ಇದೇನು ಗೊತ್ತಿಲ್ಲದವರ ಹಾಗೆ ಆಡ್ತಿಯಲ್ಲ? ರಾಮಯ್ಯ ಭಾವ ಒಬ್ಬರೆ ಏನು ಮೈಸೂರಿಗೆ ಹೋಗಿ ದ್ದವರು. ಆಗ ಸೀತೆ ಏನೂ ಮಾತಾಡದೆ ಸುಮ್ಮನಾದಳು. ಏನಪ್ಪ ಮದುವೆ ಆಗಬೇಕಾದ್ರೆನೆ ಹೆಸರು ಹೇಳೋಕೆ ಇಷ್ಟೊಂದು ನಾಚಿಕೇನೆ? ಎಂದಾಗ ಸೀತೆ 'ಅಣ್ಣಯ್ಯ ಸುಮ್ಮನಿರೋ' ಎಂದು ನುಡಿದಳು. 'ಅಲ್ಲಾ ಮತ್ತೆ ಮದುವೆಯಾಗೋಕೆ ಮುಂಚೇನೆ ಹೆಸರು ಹೇಳೋಕೆ ನಾಚ್ತಿಯಲ್ಲ'. ಆಗ ಸೀತೆಗೆ ಅವ ಮಾನವಾದಂತಾದರೂ ಧೈರ್ಯವನ್ನು ಪ್ರದರ್ಶಿಸುತ್ತಾ ಅವನ ಕಡೆ ನೋಡಿ 'ಯಾರೋ ಹೂವಯ್ಯ ಭಾವನೂ ಬರ್ತಾರೆ' ಅಂದರು. ಆಗ ಅವಳ ಕೆನ್ನೆಗೆ ರಕ್ತವೇರಿ ಮುಖ ಕೆಂಪಾಯಿತು. ಆಗ ಚಿನ್ನಯ್ಯ, 'ಅಯ್ಯೋ ಗಂಡುಬೀರಿ ಗಂಡನಾಗುವವನ ಮೇಲೆ ಗೌರವವೇ ಇಲ್ಲವಲ್ಲೇ, ಅವರು ಬರಲಿ ಹೇಳ್ತೀನಿ'[3] ಎನ್ನುತ್ತಾನೆ.

ಈ ಪ್ರಸಂಗದಲ್ಲಿ ಕುವೆಂಪುರವರು ಕಥಾನಾಯಕ ಪಾತ್ರವನ್ನು ಪರಿಚಯಿಸುವ ರೀತಿ ಮತ್ತು ಪೋಷಿಸುವ ಕಲಾತ್ಮಕತೆ ಮನೋಹರವಾದದ್ದು. ಬಾಲೆಯಾದ ಸೀತೆಯನ್ನು ಅಷ್ಟು ಮುದ್ದು ಮುದ್ದಾಗಿ ಪರಿಚಯಿಸಿ ರಸಕವಳವಾಗಿಸಿದ್ದಾರೆ. ಇಲ್ಲಿ ಹೂವಯ್ಯನಿಗೆ ಸೀತೆಯನ್ನು ಮದುವೆ ಮಾಡಿಕೊಡುವಂತೆ ಮಾತಾಗಿರುವುದು, ಬಾಲಕಿಯಾದ ಸೀತೆಗೆ ಗಂಡನ ಹೆಸರನ್ನು ಹೇಳಲು ಮುಜುಗರ ಯಾ ನಾಚಿಕೆ ಯಾಗುವುದು ಶಿಶುಸಂಬದ್ಧವೇ ಅಲ್ಲವೇ? ಈ ರೀತಿಯ ಗ್ರಾಮ್ಯ ಶೈಲಿಯ ಸಾಂಸ್ಕೃತಿಕ ನಡಾವಳಿಗಳನ್ನು ಕುವೆಂಪು ಬಾಲಪ್ರಪಂಚದ ಮೂಲಕ ಓದುವ ವರ್ಗಕ್ಕೆ ತಲುಪಿಸುತ್ತಾರೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ನಾಯಕ ಮುಕುಂದಯ್ಯ ಮತ್ತು ನಾಯಕಿ ಚಿನ್ನಮ್ಮನ ಪಾತ್ರಗಳೂ ಹೀಗೇ ಬೆಳೆಯುತ್ತವೆ. ಕುವೆಂಪು ವರ್ಣನೆಯಂತೆ ಚಿನ್ನಮ್ಮ ತನ್ನ ತಾಯಿಯ ಚಲುವನ್ನೆಲ್ಲಾ ಪಡೆದು ಹುಟ್ಟಿದ್ದಳು. ಅಜ್ಜಿಯ ಆರೈಕೆ ಮತ್ತು ವಾತ್ಸಲ್ಯದಿಂದ ಆಕೆ ತೊಳೆದ ಮುತ್ತಂತೆ ಹೊಳೆಯತೊಡಗಿದಳು. ಬಾಲಕಿಯಾದ ಚಿನ್ನಮ್ಮನಿಗೆ ಅಜ್ಜಿ ಹೊಸ ಪರಿಕಾರತೊಡಿಸಿ, ದಿಷ್ಟಿಮಣಿ ಸರ ವನ್ನು ಶುಚಿಗೊಳಿಸಿ ಕೈ ಕಾಲು ಕಿವಿಗಳಿಗೆ ಆಗಿನ ಕಾಲದ ಅಭಿರುಚಿಗೆ ಅನುರೂಪವಾದ ಬಡತನದ ಒಡವೆಗಳನ್ನು ಹಾಕಿದ್ದಳು. ದಾನಮ್ಮ ಹೆಗ್ಗಡಿತಿ ಮುಕುಂದಯ್ಯನೊಡನೆ ಹೂವಳ್ಳಿಗೆ ಹೋಗಿದ್ದಾಗ ಆರು

ವರ್ಷದ ಹುಡುಗಿ ಚಿನ್ನಮ್ಮಳನ್ನು ತನ್ನ ಹತ್ತಿರಕ್ಕೆ ಕರೆದು, ತಾನು ತಂದಿದ್ದ ಕೊಬ್ಬರಿ ಬೆಲ್ಲಗಳನ್ನು ತಿನ್ನಲು ಕೊಟ್ಟ ದಾನಮ್ಮ ಹೆಗ್ಗಡಿತಿ ಪಕ್ಕದಲ್ಲಿದ್ದ ತನ್ನ ಮಗನನ್ನು ತೋರಿಸಿ "ಇಂವ ಯಾರು? ಹೇಳು ನೋಡೋಣ? ಎಂದಾಗ, ಆ ಹುಡುಗಿ ಮುಗ್ಧ ನಯನಗಳನ್ನು ಅರಳಿಸಿ ಬೆಪ್ಪು ಬೆಪ್ಪಾಗಿ ನೋಡುತ್ತಾ, ಕೊನೆಗೆ ಗುರುತು ಹಿಡಿದವಳಂತೆ ಬಾಯಿ ತೆರೆದು ಮುಗುಳುನಗೆ ಬೀರಿ ಕೊನೆಗೆ ನಾಚಿ ತಲೆಬಾಗಿ ಕೇಳಿಸಿತೋ ಇಲ್ಲವೋ ಎನ್ನುವಂತೆ ಮೆಲ್ಲಗೆ 'ಅವರು' ಎಂದಿದ್ದಳು. 'ಅವರು ಅಂದರೆ? ಅವರು ಯಾರು ಅಂತಲೇ ನಾನು ಕೇಳಿದ್ದು' ಎಂದು ದಾನಮ್ಮ ವಿನೋದದಿಂದ ಮುದ್ದು ಮಾಡಲು, ಮತ್ತೆ ಚಿನ್ನಮ್ಮ 'ಅವರು' ಎಂದಳು. ಆಗ ನಡುವೆ ಬಾಯಿ ಹಾಕಿದ ಚಿನ್ನಮ್ಮಳ ಅಜ್ಜಿ ನಗುತ್ತಾ 'ಅಯ್ಯೋ ಮಗುವೆ ಬಿರುಗು ಗಾದೆ ಮಾಡ್ತೀಯಲ್ಲೇ, ಅವರು ಅಂದರೆ ಅವಾ ನಿನ್ನ ಭಾವಕಣೆ' ಎಂದಾಗ ಚಿನ್ನಮ್ಮ ಕೀರಲು ಧ್ವನಿಯಲ್ಲಿ ಬಾಆಆವ"[3] ಎಂದಿದ್ದಳು.

ಗಂಡನಾಗುವವನ ಹೆಸರನ್ನು ಹೇಳಬಾರದು, ಹೇಳಿದರೆ ಅವನ ಆಯಸ್ಸು ಕಡಿಮೆಯಾಗುತ್ತದೆ, ಅಗೌರವ ತೋರಿದಂತಾಗುತ್ತದೆ ಎಂಬ ಅನಧಿಕೃತ ಸಂವಿಧಾನಗಳು ಮಕ್ಕಳ ಮೂಲಕವೇ ಅಭಿವ್ಯಕ್ತಗೊಳ್ಳುತ್ತವೆ. ಬಿರಿಗುಗಾದೆ ಮಲೆನಾಡಿನಲ್ಲಿ ಜನಜನಿತವಾದ ಒಗಟಿನ ವೈಖರಿ. ಬಿರುಗುಗಾದೆ ಎಂದರೆ ಗಂಡನ ಹೆಸರನ್ನು ಹೆಂಡತಿ ಅನಿವಾರ್ಯವಾಗಿ ಹೇಳುವ ಪ್ರಸಂಗ ಬಂದಾಗ ಗಂಡನ ಹೆಸರಿಗೆ ಸಂವಾದವಾಗುವಂತಹ ಒಗಟನ್ನು ಹೇಳುವುದು ವಾಡಿಕೆ. ನಂತರ ಅದನ್ನು ಉಳಿದವರು ಅರ್ಥ ಮಾಡಿಕೊಳ್ಳಬೇಕು.

ಇಂತಹ ಶಾಸ್ತ್ರ ಸಂಪ್ರದಾಯಗಳೆಲ್ಲಾ ಮಕ್ಕಳ ಪಾಲಿಗೆ ಹೊಸತು, ಲಜ್ಜಾಸಹಿತವಾಗಿ ವಿನೋದವಿದ್ದರೂ ಅವುಗಳನ್ನು ಮಾತನಾಡುವಾಗ ಒಂದು ರೀತಿಯ ಸೆಳೆತ, ರೋಮಾಂಚನ ಭಾವ ಎದ್ದು ಕಾಣುತ್ತದೆ. ಮದುಮಗಳು ಕಾದಂಬರಿಯಲ್ಲಿ ಒಂದು ದಿನ ಅಡಿಕೆ ಕತ್ತರಿಸುತ್ತಿರುವಾಗ ಅಜ್ಜಿ ಹಾಗೂ ಚಿನ್ನಮ್ಮನ ನಡುವೆ ಈ ರೀತಿಯ ಸಂಭಾಷಣೆ ನಡೆಯುತ್ತದೆ.

"ಅಜ್ಜಿ....

ಅಜ್ಜಿ ಎಲೆಯಡಕೆ ಅಗಿಯುತ್ತಾ 'ಏನೇ?'

ಮತ್ತೇ.......... ಮತ್ತೇ....... ಮತ್ತೇ....

ಎಂತದೇ ಅದು ಮತ್ತೆ ಮತ್ತೆ

ಅಜ್ಜೀ..... ಯಾವಾಗ ಮದೇ ಮಾಡಿ ಕೊಡ್ತೀಯ ಅಜ್ಜೀ..

ಯಾರಿಗೆ ಮದ್ವೇ ಮಾಡೋದು

ಮತ್ತೆ... ಮನ್ನೇ ನೀನೆ ಹೇಳ್ದೆ...

ಏನು ಹೇಳ್ದೆ?

ಮತ್ತೆ ನನ್ನ ಮದೆ ಮಾಡಿ ಕೊಡ್ತೀನಿ ಅಂದೆ ಅವರ ಮನೀಗೆ ಹೋಗಾಕೆ.

ಥೂ ನಿನ್ನ. ಹಾಗೆಲ್ಲಾ ಹೇಳಬ್ಯಾಡ್ವೇ. ಅಯ್ಯೋ ನನ್ನ ಬಿರುಗುಮಗಳೆ, ಅವರ ಮನಿಗೆ ಹೋಗಾಕೆ ನಿನ್ನ ಮದುವೆ ಬೇರೆ ಆಗಬೇಕಾ?"[8]

ಮತ್ತೆ ಅಜ್ಜಿ ಮೊಮ್ಮಗಳು ಮುಕುಂದಯ್ಯನ ಮನೆಗೆ ಬರುತ್ತಿದ್ದಾಗ, ಚಿನ್ನಮ್ಮ ಮಾಡಿದ ಅವಸರ ಆತುರಗಳು ಸ್ವಾಭಾವಿಕವಾಗಿ ತೋರುತ್ತವೆ. 'ಹೋ ಬಂತಲ್ಲಾ ನಮ್ಮನೆ' ಎಂದು ಚಿನ್ನಮ್ಮ ಹೇಳಿದಾಗ, 'ನಿನ್ನ ಮುಕುಂದ ಭಾವನ ಮನೆ ಕಣೇ' ಎಂದು ಅಜ್ಜಿ ತಿದ್ದುತ್ತಾಳೆ. ಆಗ ಚಿನ್ನಮ್ಮ ತಪ್ಪೊಪ್ಪಿಕೊಂಡಂತೆ 'ಹೌದು, ಇದು ಮುಕುಂದ ಭಾವನ ಮನೆ' ಎನ್ನುತ್ತಾಳೆ. ಈ ಬಾಲಿಶ ಪ್ರಪಂಚವೇ ಹಾಗಲ್ಲವೇ ಮೂರಕ್ಕಿಂತ ಹೆಚ್ಚು ಆರಕ್ಕಿಂತ ಕಡಿಮೆ.

ಕುವೆಂಪು ಕಾದಂಬರಿಗಳಲ್ಲಿ ಕಂಡುಬರುವ ಪಾತ್ರಗಳು ಹಲವಾರು. ತೊಟ್ಟಿಲಿನ ಹಸುಕಂದನಿಂದ ಹಿಡಿದು ವಿವಾಹವಾಗುವ ತರುಣ ತರುಣಿಯರವರೆಗೆ ಅವರ ಬಾಲಪ್ರಪಂಚ ಹರಿದಿದೆ, ಜೀವಂತಿಕೆಯಿಂದಲೂ ಕೂಡಿದೆ. ಕಾನೂರು ಹೆಗ್ಗಡಿತಿಯಲ್ಲಿ ಹೂವಯ್ಯ ನಾಯಕನಾದಂತೆ ಶಿಶುಪ್ರಪಂಚದ ನಾಯಕನಾಗಿ ವಾಸು ಗೋಚರಿಸುತ್ತಾನೆ. ಹಾಗೆಯೇ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಮುಕುಂದಯ್ಯನ ಜೊತೆ ಧರ್ಮು ಕಾಣಿಸಿಕೊಳ್ಳುತ್ತಾನೆ.

ಕಾನೂರು ಹೆಗ್ಗಡಿತಿಯ ವಾಸು ಮೊದಲು ಬೆಣ್ಣೆಕಳ್ಳನಾಗಿ ಕಂಡುಬರುತ್ತಾನೆ. ಚಿಕ್ಕಮ್ಮ ಸುಬ್ಬಿ ನೀಡಿದ ಉಪ್ಪಿಟ್ಟನ್ನು ಕೂತು ಅನ್ಯಮನಸ್ಕನಾಗಿ ಕುಳಿತು ಮುಕ್ಕುತ್ತಿದ್ದ ವಾಸುಗೆ "ವಾಸು ನಿನ್ನೆ ನೀನು ಬೆಣ್ಣೆ ಕದ್ದಿದ್ದು ಹೇಳಲೇನು?" ಎಂಬ ವಾಣಿಯೊಂದು ಕೇಳಿಸುತ್ತದೆ. ಎದುರು ನೋಡಿದರೆ ಕಡೆಗೋಲು ಕಂಬ ಕಳ್ಳತನಕ್ಕೆ ಸಾಕ್ಷಿಯಾಗಿ ನಿಂತಿದೆ. ಅಜ್ಜಮ್ಮನೇ ಕಡೆಗೋಲು ಕಂಬದಲ್ಲಿ ಅಡಗಿಕೊಂಡು ಮಾತಾಡಿದರೆಂದು ಭಾವಿಸಿ ಮನಸ್ಸಿನಲ್ಲಿಯೇ 'ಅಜ್ಜಮ್ಮ ನಿನ್ನ ದಮ್ಮಯ್ಯಾ ಹೇಳಬೇಡ! ಚಿಕ್ಕಮ್ಮ ಇಲ್ಲೇ ನಿಂತಿದೆ'[9] ಎಂದು ಉಪ್ಪಿಟ್ಟು ತಿನ್ನತೊಡಗುತ್ತಾನೆ. ಮಕ್ಕಳೇ ಆಗಲಿ ಹಿರಿಯರೇ ಆಗಲಿ ಏನಾದರು ಅಪರಾಧ ಮಾಡಿದಾಗ ಆ ಪಾಪಪ್ರಜ್ಞೆ ಕಾಡುತ್ತದೆ. ದೊಡ್ಡವರು ಬೇಕಾದರೆ ತಾವು ಮಾಡಿದ ತಪ್ಪನ್ನು ಮುಚ್ಚಿ ಹಾಕಿ ತಪ್ಪನ್ನು ಮಾಡಿಯೇ ಇಲ್ಲವೆಂದು ವಾದಿಸಬಹುದು. ಆದರೆ ಮಕ್ಕಳ ಮನಸ್ಸು ಅದೆಷ್ಟು ಸೂಕ್ಷ್ಮ ಅದೆಷ್ಟು ಸ್ವಚ್ಛಂದವೆಂದರೆ ಯಾರೂ ಆತನನ್ನು ಬೆಣ್ಣೆ ಕದ್ದು ತಿಂದ ವಿಷಯವಾಗಿ ಕೇಳದಿದ್ದರೂ ಅಂತರ್ವಾಣಿಯಿಂದ ಅವನ ಸುಪ್ತ ಪ್ರಜ್ಞೆ ಜಾಗೃತವಾಗಿ ತನ್ನ ತಪ್ಪನ್ನು ಯಾವುದೇ ದಾಕ್ಷಿಣ್ಯವಿಲ್ಲದೆ ಒಪ್ಪಿಕೊಳ್ಳುತ್ತದೆ.

ಆದರೆ ವಾಸುವಿಗೆ ನಿಜವಾಗಿಯೂ ಆ ಪ್ರಶ್ನೆಯನ್ನು ಕೇಳಿದವರು ದೊಡ್ಡಮ್ಮನಾದ ನಾಗಮ್ಮನವರು ಎಂದು ತಿಳಿಯದೇ ಹೋಯಿತು.

ಎಲೆಯಲ್ಲಿದ್ದ ಉಪ್ಪಿಟ್ಟನ್ನು ತಿಂದು ಮುಗಿಸಿದ ಪೋರ 'ಚಿಕ್ಕಮ್ಮ ಮತ್ತಷ್ಟು ಉಪ್ಪಿಟ್ಟು' ಎಂದು ಕೂಗುತ್ತಾನೆ. ಆದರೆ ಮಕ್ಕಳಿಲ್ಲದ, ಮಗುವಿನ ವಾತ್ಸಲ್ಯವೇನೆಂದು ಅರಿಯದ ಶಯನಕ್ಕೆ ಉದರಕ್ಕೆ ಮಾತ್ರ ಚಂದ್ರಯ್ಯಗೌಡರಿಗೆ ಹೆಂಡತಿಯಾಗಿ ಕಾನೂರಿಗೆ ಹೆಗ್ಗಡಿತಿಯಾದ ಸುಬ್ಬಮ್ಮ "ಏನು ಹೊಟ್ಟೇನೊ ನಿನ್ದು! ಉಪ್ಪಿಟ್ಟಿಲ್ಲಾ" ಎಂದು ರೇಗಿಬಿಡುತ್ತಾಳೆ.

ಮಲತಾಯಿಯ ಮಲತಾಯಿ ಧೋರಣೆಯಿಂದ ವಾಸುವಿನ ಕಣ್ಣು ತುಂಬಿ ಬಂದರೂ ಮಾತೃ ವಾತ್ಸಲ್ಯ ವಿಹೀನವಾದ ಅವನ ಗಮನ ಸೋದರ ವಾತ್ಸಲ್ಯದ ಕಡೆ ಲೀಲಾಜಾಲವಾಗಿ ಹರಿಯ ತೊಡಗುತ್ತದೆ. ಕಿಟಕಿಯ ಕಡೆ ನೋಡುತ್ತಾನೆ ಬಿಸಿಲು ಬಂದಿದೆ, ಹಲಸಿನ ಮರ ಕೈ ಬೀಸಿ ಕರೆಯುವಂತೆ ತೋರಿತು. ಅಂದು ಅವನು ಮಾಡಬೇಕಾದ ಸಾಹಸ ಕಾರ್ಯಗಳೆಲ್ಲ ನೆನಪಿಗೆ ಬಂದವು. ಪಾಪ ಆ ಮುಗ್ಧ ಹುಡುಗ ಈ ಹಂತದಲ್ಲಿ ತುಂಬ ಬಿಸಿಯೋ ಬಿಸಿ. ಹೂವಣ್ಣಯ್ಯ ರಾಮಣ್ಣಯ್ಯ ಬರುತ್ತಾರೆ. ಅವರಿಗಾಗಿ ಕಲ್ಲುಸಂಪಗೆ ಹಣ್ಣು, ಬೆಮ್ಮಾರಲ ಹಣ್ಣು ತರಬೇಕು. ತಾನು ಹಿಂದಿನ ದಿನ ಒಡ್ಡಿದ ಉರುಳಿನಲ್ಲಿ ಹಕ್ಕಿ ಸಿಕ್ಕಿ ಬಿದ್ದಿದೆಯೋ ಏನೊ ಅಂತಾ ನೋಡಬೇಕು. ಆ ಹುಳಿಚೊಪ್ಪಿನ ಮಟ್ಟಿನಲ್ಲಿ ಪಿಕಳಾರನ ಹಕ್ಕಿಯ ಮೊಟ್ಟೆಗಳು ಏನಾಗಿವೆಯೋ ಹೋಗಿ ನೋಡಬೇಕು. ಬೈರನ ಮಗ ಗಂಗ ಹುಡುಗನ ಬಳಿ ಕೊಳಲು ಮಾಡಲು ಹೇಳಿದ ಕೆಲಸ ಎಲ್ಲಿಯವರೆಗೆ ಬಂದಿದೆಯೋ ನೋಡಬೇಕು. ನಿನ್ನೆ ರಬ್ಬರು ಬಿಲ್ಲಿನಿಂದ ಹೊಡೆದ ಹಕ್ಕಿಯೊಂದು ಪೊದೆಗೆ ಬಿದ್ದು ಎಷ್ಟು ಹರಸಿದರೂ ಸಿಕ್ಕಲಿಲ್ಲವಾದ್ದರಿಂದ ಅದನ್ನು ಪತ್ತೆ ಮಾಡಬೇಕು. ಹೀಗೆ ವಾಸುವಿನ ಕೆಲಸದ ಪಟ್ಟಿ ದೊಡ್ಡದಾಗಿ ಆಂಜನೇಯನ ಬಾಲದಂತೆ ಬೆಳೆಯುತ್ತಾ ಹೋಗುತ್ತದೆ. ಚಿಕ್ಕಮ್ಮನನ್ನು ನಾನಾ ಪರಿಭಾಷೆಗಳಿಂದ ಶಪಿಸುತ್ತಾ ಅಡುಗೆ ಮನೆಯಿಂದ ಹೊರಬಂದ ವಾಸು ಜಗಲಿ ತಲುಪಿದಾಗ ಅವನ ಆಟದ ಗೆಳೆಯ ಆಳು ಮಗ ಪುಟ್ಟ, ಮುಳ್ಳು ಚುಚ್ಚಿ ಕಾಲು ಊದಿಕೊಂಡು ಮಲಗಿರುತ್ತಾನೆ. ಆತನನ್ನು ಬೇಟೆಗಾಗಿ ಕರೆಯಲು, ಆತ ತನಗೆ ಹುಷಾರಿಲ್ಲವೆಂದು, ನೀವೇ ಹೋಗಿರೆಂದು ಹೇಳುತ್ತಾನೆ. ವಾಸು ತನ್ನ ಹಾದಿಯನ್ನು ಮುಂದುವರೆಸಲು ಆಯುಧಗಳ ಹುಡುಕಾಟದಲ್ಲಿ ತೊಡಗುತ್ತಾನೆ. ವಾಸುವಿನ ಅತ್ಯಮೂಲ್ಯ ಆಯುಧಗಳೆಂದರೆ ರಬ್ಬರ್ ಬಿಲ್ಲು ಮತ್ತು ಕಲ್ಲಿನ ಚೀಲ. ಬಿಲ್ಲು ಬಾಣ ಹಾಗು ಬತ್ತಳಿಕೆಯಂತೆ ಇವು ಕಾರ್ಯನಿರ್ವಹಿಸುತ್ತವೆ. ಪಾಠದ ಶಾಲೆಗೆ ಸ್ಲೇಟು ಪುಸ್ತಕಗಳನ್ನು ಹಾಕಿಕೊಂಡು ಹೋಗಲು ಹೊಲಿಸಿಕೊಟ್ಟಿದ್ದ ಚೀಲಕ್ಕೆ ಪಾಪ ರಬ್ಬರ್ ಬಿಲ್ಲಿಗಾಗಿ ಕಲ್ಲು ಹೊರುವ ಚಾಕರಿ ಸಿಕ್ಕಿತ್ತು. 'ರಜಾ ಕಾಲದಲ್ಲಿ ಅದಕ್ಕೇಕೆ ನಿರುದ್ಯೋಗ?'[5] ಎಂಬ ಕುವೆಂಪುರವರ ಮಾತು, ಶಾಲೆಯಲ್ಲಿ ಕಲಿಯುವುದಕ್ಕಿಂತ ಪ್ರಕೃತಿಯಲ್ಲಿ ಅನುಭವದಿಂದ ಕಲಿಯುವುದು ಸಾಕಷ್ಟಿದೆಯೆಂಬ ಅರ್ಥಗ್ರಾಹಿ

ಯಾಗಿದೆ. ಇಂದಿನ ನೆಪ ಮಾತ್ರದ ಓದು ಬರಹ ಲೆಕ್ಕಾಚಾರಕ್ಕೆ ಸೀಮಿತ ವಾದ ನೀರಸ ಶಿಕ್ಷಣ ವ್ಯವಸ್ಥೆ ಯನ್ನು ಕುವೆಂಪು ಟೀಕಿಸಿ ಅನುಭವಗಮ್ಯವಾದ ಕುಶಲತೆ ಆಧಾರಿತ ಶಿಕ್ಷಣ ದೊರಕಬೇಕೆಂದು ವಾದಿಸು ತ್ತಾರೆ.

ವಾಸುವಿನ ಜೇಬುಗಳ ಮಹಿಮೆ ಮತ್ತು ಅವುಗಳಲ್ಲಿನ ಅಸಂಖ್ಯಾತ ವಸ್ತುಗಳು ನಮ್ಮನ್ನು ಒಳಗೊಳಗೇ ನಸು ನಗುವಂತೆ ಮಾಡುತ್ತವೆ. ರಬ್ಬರ್ ಬಿಲ್ಲು ಮಾಯವಾಗಿದ್ದುದನ್ನು ಕಂಡ ವಾಸು ತನ್ನ ಜೇಬುಗಳನ್ನು ಜಪ್ತಿ ಮಾಡಿದನು. ಸರ್ವ ವಸ್ತು ಸಂಗ್ರಹ ಶಾಲೆ, ಮ್ಯೂಸಿಯಂನಂತಿದ್ದ ಆ ಜಿಗುಟಾದ ಜೇಬುಗಳಿಂದ ಹೊರಬಿದ್ದ ವಸ್ತುಗಳು ಒಂದೆ ಎರಡೇ!! ಜಜ್ಜಿ ಹೋಗಿದ್ದ ಒಂದು ತವರದ ಪೀಪಿ, ಯಾವ ಕಾಲದ್ದೋ ಏನೊ ಒಂದು ರೊಟ್ಟಿಯ ಚೂರು, ಎರಡು ಮೂರು ಬಳಪದ ಚೂರು, ಸಿಂಡು ಮುಸುಡಿಯ ಒಂದು ಸೀಸದ ಕಡ್ಡಿಯ ವಾಮನಾವತಾರ, ಏಳೆಂಟು ಕೋವಿಯ ಚೆರೆ, ಒಂದು ಬಣ್ಣದ ಬಿಂಗ, ಅರ್ಧ ತಿಂದಿದ್ದ ಒಂದು ಉತ್ತತ್ತೆಯ ಹಣ್ಣು, ಒಂದೆರಡು ದುಂಡನೆಯ ಕಲ್ಲು ಹರಳುಗಳು, ಅಜಿ ಬಿಜಿಯಾಗಿದ್ದ ಬೆಮ್ಮಾರಲ ಹಣ್ಣು, ಒಂದು ಧೂಪದ ಕಾಯಿ, ರಬ್ಬರ್ ಚೂರುಗಳು, ಅಷ್ಟಾವಕ್ರವಾಗಿದ್ದ ಒಂದು ಹಿಡಿಹೋದ ಸಣ್ಣ ಚೂರಿ, ಒಂದು ಬಣ್ಣ ಬಣ್ಣದಾಗಿದ್ದ ಹಕ್ಕಿಯ ಪುಕ್ಕ, ಒಂದು ಸೇಫ್ಟೀಪಿನ್, ಒಂದು ಮಧ್ಯ ತೂತಾಗಿದ್ದ ಮೂರು ಕಾಸು, ಹಾಳು ಸಾಮಾನುಗಳು ಸಮುದ್ರ ಗರ್ಭದಂತೆ ತೆಗೆದಷ್ಟು ಸಿಕ್ಕುತ್ತಿವೆ. ವಾಸುವಿನ ಇಷ್ಟೆಲ್ಲಾ ಸಾಮಾಗ್ರಿಗಳಿಗೆ ತಂಗುದಾಣವಾಗಿದೆ ಅವನ ಜೇಬು. ಈ ರೀತಿಯಾದ ಆಟದ ಪರಿ, ಆಟದ ಪ್ರಾದೇಶಿಕ ಸರಕು ಸಾಮಗ್ರಿಗಳನ್ನು ನಗರ ಪರಿಸರದ ಮಕ್ಕಳಲ್ಲಿ ಕಾಣುವುದೆಂತು? ಇಂದಿನ ತಾಂತ್ರಿಕ ಕ್ರೀಡಾ ಸಾಮಗ್ರಿಗಳಿಗೆ ಪೈಪೋಟಿ ನೀಡುವಂತಿವೆ ವಾಸುವಿನ ಜೇಬಿನಲ್ಲಿರುವ ಸಾಮ ಗ್ರಿಗಳು. ಬೇಲರ ಬೈರನ ಮಗ ಗಂಗ ಹುಡುಗನೊಡನೆ ವಾಸುವಿನ ಅಡವಿಯಾನದ ಕಥೆ ಮತ್ತಷ್ಟು ಭಾವುಕ ಮತ್ತು ರೋಚಕವಾಗಿ ಮೂಡಿಬಂದಿದೆ.

ವಾಸು ತನ್ನ ಬಿಲ್ಲು ಬಾಣಾದಿ ಸಕಲ ಸಾಮಗ್ರಿಗಳೊಂದಿಗೆ ಗಂಗ ಹುಡುಗನನ್ನು ಕರೆಯಲು ಬೈರನ ಬಿಡಾರಕ್ಕೆ ಹೋದನು. ಬಿಡಾರದಲ್ಲಿ ಬೈರನು ಇರಲಿಲ್ಲ, ಅವನ ಹೆಂಡತಿಯಾದ ಸೇಸಿಯೂ ಇರ ಲಿಲ್ಲ, ಬೆಳಿಗ್ಗೆ ಸಂಚಾರಕ್ಕೆ ಹೋಗಿ ಹಿಂತಿರುಗಿದ್ದ ಗಂಗ ಹುಡುಗನು ಬಿಡಾರದ ಬಾಗಿಲಲ್ಲಿ ಕುಳಿತು ಏನೋ ಮಾಡುತ್ತಿದ್ದನು. ನಾಯಿ ಬೊಗಳಿದಾಗ ಗಂಗ ತಿರುಗಿ ನೋಡಿದನು. ವಾಸು ತನ್ನ ಬಿಡಾರದ ಕಡೆ ಬರುತ್ತಿದ್ದುದನ್ನು ಕಂಡು ಗಂಗನು ಗಾಬರಿಯಿಂದ ತನ್ನ ಕೈಲಿದ್ದುದನ್ನು, ನೆಲೆದ ಮೇಲೆ ಬಿದ್ದುದನ್ನು ಬಿಡಾರದೊಳಗೆ ಕತ್ತಲೆಗೆ ಎಸೆದನು. ಅಷ್ಟರಲ್ಲೇ ವಾಸು 'ಓ ಗಂಗ' ಎಂದು ಕರೆದನು. ಗಂಗನಿಗೆ ಕೊಳಲು ಮಾಡಿ ಆಯ್ತೇನೊ ಎಂದು ವಾಸು ಕೇಳಿದಾಗ, ಇಲ್ರಯ್ಯಾ ಇನ್ನು ಎಂದುತ್ತರಿಸಿದ. ಎಲ್ಲಿ ಎಷ್ಟಾಗಿದೆಯೋ ನೋಡೋಣ ತಗಂಡು ಬಾ ಎಂದಾಗ, 'ಅಪ್ಪ ಎಲ್ಲೊ ಇಟ್ಟು ಹೋಗ್ಯಾನೆ' ಎಂಬುದು

ಗಂಗನ ಪ್ರತ್ಯುತ್ತರ. ವಾಸ್ತವವೆಂದರೆ ಗಂಗನು ವಾಸುವಿಗಾಗಿ ಕೊಳಲನ್ನು ಮಾಡುವ ಕೆಲಸದ ತಂಟೆಗೆ ಹೋಗಿರಲಿಲ್ಲ. ಹೋಗಲಿ ಬಾ ನೆನ್ನೆ ಹೊಡೆದ ಹಕ್ಕಿ ಹುಡುಕೋಣ ಗಂಗ ಕಳ್ಳತನದ ಮಾತಿನಿಂದ ಬಿತ್ತೋ ಬೀಳಲಿಲ್ಲವೋ ಅದೆಲ್ಲಿ ಸಿಕ್ತದೆ ಈಗ ಎಂದನು. 'ಛೆ ಸರಿಯಾಗಿ ಕೆಳಗೆ ಬಿದ್ದಿದೆ ನಾ ನೋಡಿ ದ್ದೀನಿ' ಎಂದು ವಾಸು ಸಮರ್ಥಿಸಿದರೂ, 'ಬಿದ್ದಿದ್ದರೂ ರಾತ್ರಿ ನರಿ ಗಿರಿ ಕಚ್ಚಿಕೊಂಡು ಹೋಗಿರುತ್ತದೆ'[2] ಎಂದು ಗಂಗನು ಮೊಂಡುವಾದ ಮಾಡುತ್ತಾನೆ.

ವಾಸು ಗಂಗನನ್ನು ಕುರಿತು ನೀ ಬರ್ತೀಯೋ ಇಲ್ಲೊ? ಅದೊಂದೆ ಕೆಲಸ ಅಲ್ಲ, ಸಬೆ ಒಡ್ಡಿದ್ದನ್ನು ನೋಡಿಕೊಂಡು ಬರಬೇಕು. ಆ ಪಿಕಳಾರನ ಮರಿಗೆ ಹಣ್ಣು ಕೊಡಬೇಕು. ಆಮೇಲೆ ಮಜ್ಜಾ ನ ಇವತ್ತು ಹೂವಣ್ಣಯ್ಯ ರಾಮಣ್ಣಯ್ಯ ಬರ್ತಾರೆ ಮೈಸೂರಿಂದ. ಅವರಿಗೆ ಬೆಮ್ಮಾರಲ ಹಣ್ಣು, ಕಲ್ಲು ಸಂಪಗೆ ಹಣ್ಣು ತರಬೇಕು ಎಂದು ಒತ್ತಾಯಿಸಿ, ಅವನನ್ನು ಕಾಡಿನೊಳಕ್ಕೆ ಕರೆದುಕೊಂಡು ಹೊರಡುತ್ತಾನೆ. ಅಲ್ಲಿ ಹೋಗಿ ನೋಡಿದಾಗ ವಾಸು ಪ್ರೀತಿಯಿಂದ ಸಾಕುತ್ತಿದ್ದ ಆ ಹಕ್ಕಿಯ ಮರಿಗಳು ನಾಪತ್ತೆಯಾಗಿವೆ. ಅವನಿಗೆ ಆಕಾಶವೇ ಕಳಚಿ ಬಿದ್ದಂತಾಯಿತು. ಮಕ್ಕಳ ಮನಸ್ಸು ನಿಷ್ಕಲ್ಮಶವಾಗಿದ್ದು ಅಗೋಚರ ಭಾವ ಪ್ರಪಂಚದಲ್ಲಿ ಅವರಿಗಿಷ್ಟವಾದ ಪ್ರಾಣಿ ಪಕ್ಷಿಗಳ ಬಗೆಗೆ ಅಪಾರವಾದ ಮಮತೆ ಹೊಂದಿರುತ್ತಾರೆ. ವಾಸು ಬೇಟೆಗಾರನಾಗಿ ಪ್ರಾಣಿ ಪಕ್ಷಿಗಳನ್ನು ಕೊಂದರೂ ಎಲ್ಲೋ ಒಂದು ಕಡೆ ಅಮಾಯಕವಾದ ಮುಗ್ಧ ಮೃಗ-ಖಗ ಸಂಕುಲವನ್ನು ರಕ್ಷಿಸುವ ಹೊಣೆ ಹೊತ್ತ ಅಭಯಾರಣ್ಯ ರಕ್ಷಕನಾಗುತ್ತಾನೆ.

ಹಕ್ಕಿ ಮರಿಗಳು ಗೂಡಿನಿಂದ ಕಾಣೆಯಾಗಿರುವುದನ್ನು ಕಂಡ ವಾಸು ಕಕ್ಕಾಬಿಕ್ಕಿಯಾಗಿ 'ಅಯ್ಯೋ ಯಾರೋ ಬಡ್ಡಿ ಮಕ್ಳು ಕದ್ದುಕೊಂಡು ಹೋಗಿದ್ದಾರೆ' ಎಂದು ಹಲುಬುತ್ತಾನೆ. ಗಂಗನಿಗೆ ನೀ ತೆಗೆದು ಕೊಂಡು ಹೋದೇನೋ ಎಂದು ಕೇಳಿದಾಗ, ನಾ ಈ ಕಡೆಗೇ ಬರಲಿಲ್ಲ ದೇವ್ರಾಣೆ. ಪುಟ್ಟಯ್ಯ ಏನಾದ್ರು ಬಂದಿದ್ರೋ ಏನೋ ಎಂದು ತಾನು ಮಾಡಿದ ತಪ್ಪನ್ನು, ಕಳ್ಳತನವನ್ನು ಮುಳ್ಳು ಚುಚ್ಚಿ ನೋವಿನಿಂದ ಮಲಗಿರುವ ಪುಟ್ಟುವಿನ ಮೇಲೆ ಹೊರಿಸಲು ಗಂಗ ಮುಂದಾಗುತ್ತಾನೆ. ಆದರೆ ವಾಸು ಅದನ್ನು ನಂಬುವ ಸ್ಥಿತಿಯಲ್ಲಿ ಇರಲಿಲ್ಲ. ಆತನಿಗೆ ಯಾವುದೊಂದು ಬಗೆಹರಿಯಲಿಲ್ಲ. ಕಳ್ಳನನ್ನು ಬಾಯಿಗೆ ಬಂದಂತೆ ಶಪಿಸುತ್ತಾ, ಹಣ್ಣುಗಳಿಗಾಗಿ ಅಲೆದು ಅಲೆದು ಸುಸ್ತಾಗಿ ಹನ್ನೊಂದು ಗಂಟೆಯ ಹೊತ್ತಿಗೆ ಬೈರನ ಬಿಡಾರಕ್ಕೆ ಬಂದನು. ಬಿಡಾರದೊಳಗೆ ಪಾಕಕಾರ್ಯದಲ್ಲಿ ನಿರತನಾಗಿದ್ದ ಸೇಸಿಯು ಮಗನು ಬಂದ ಧ್ವನಿಯನ್ನು ಗುರುತಿಸಿ 'ಗಂಗಾ ಈ ಹಕ್ಕಿ ತಿಪ್ಪುಳಿಸಿ ಸುಟ್ಟುಕೊಡೋ' ಎಂದು ಎರಡು ಹಕ್ಕಿ ಮರಿಗಳನ್ನು ಗಂಗನ ಕಾಲ ಬುಡಕ್ಕೆ ಎಸೆದು ಹೋದಳು. ಗಂಗ ಭಯದಿಂದ ತಡವರಿಸಿದ. ಗಂಗ ಹುಡುಗ ಹಿಂದಿನ ದಿನ ಸಬೆಗೆ ಬಿದ್ದಿದ್ದ ಹಕ್ಕಿಯನ್ನು ಹುಡುಕಿ ತರುವಾಗ ಆ ಮುಗ್ಧ ಹಕ್ಕಿ ಮರಿಗಳನ್ನು

ಆಹಾರಕ್ಕಾಗಿ ಎತ್ತಿಕಂಡು ಬಂದಿದ್ದ. ಆದರೆ ಒಡೆಯ ವಾಸುವಿನ ಬಳಿಯಲ್ಲಿ ನಾ ನೋಡಿಲ್ಲ ಎಂದು ನಾಟಕಾಭಿನಯ ಮಾಡಿದ. ಈ ವಿಷಯ ಸಂಪೂರ್ಣವಾಗಿ ಗ್ರಹಿಕೆಯಾಗಿ ತನ್ನ ಅಪರಿಮಿತ ಕೋಪಾಗ್ನಿಯಿಂದ ಅಸ್ಪೃಶ್ಯನಾದ ಬೇಲರ ಹುಡುಗನಿಗೆ ಚೆನ್ನಾಗಿ ಗುದ್ದಿ ತನ್ನ ಕೋಪವನ್ನು ಇಂಗಿಸಿಕೊಂಡು, ತನ್ನ ಜೇಬಿನಲ್ಲಿದ್ದ ಹಕ್ಕಿಯನ್ನು ಅವನ ಹತ್ತಿರ ಎಸೆದು ಬಂದನು.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಧರ್ಮು, ಕಾಡು, ತಿಮ್ಮ ಮುಂತಾದ ಮಕ್ಕಳ ಪಾತ್ರಗಳು ಗೋಚರಿಸುತ್ತವೆ. ಕಾನೂರು ಐಗಳ ಕೂಲಿಮಠದಲ್ಲಿ ಗಂಜಿಯುಂಡು ವಿದ್ಯಾಭ್ಯಾಸ ಮಾಡುತ್ತಿದ್ದರು. ಹಳ್ಳಿಯಲ್ಲಿ ಹಿಂದಿನ ಕಾಲದಲ್ಲಿದ್ದ ಶಿಕ್ಷಣ ಪದ್ಧತಿಯು ಐಗಳು ಮತ್ತು ಬಾಲಕರ ಮೂಲಕ ಪರಿಚಯವಾಗುತ್ತದೆ. ಮಕ್ಕಳೆಲ್ಲರೂ ಅಭ್ಯಾಸಕ್ಕೆ ಬಂದಾಗ ಓಹೋ! ಇವತ್ತು ಆಡಿಕೆ ಮುಂದಿನ ಅಯಿತುವಾರದ ತನಕ ಐಗಳು ಇರುವುದಿಲ್ಲ 'ಬನ್ರೋ ಲಗ್ಗೆ ಮಣೆ ಆಡೋಣ' ಎನ್ನುತ್ತಾರೆ. ಆಗ ನೀವೆಲ್ಲ ಕಣಕ್ಕೆ ಹೋಗ್ರೋ ನಾ ಚೆಂಡು ಮಣೆ ಹುಡುಕಿ ತರ್ತೀನಿ ಎಂದು ಧರ್ಮು ಹುಡುಕ ಹೊರಟ. ಹುಡುಗರು ಕೊನೆಗೆ ಧರ್ಮುನನ್ನು ಹುಡುಕುತ್ತಾ ಎಲ್ಲಿ ಹೋದ ಅವನು? ಕರೆಯಿರಿ ಎಂದಾಗ, 'ಮತ್ತೆಲ್ಲಿ ಹೋಗ್ತಾನೆ ಗಂಜಿ ಉಂಡು ಹಳ್ಳದ ಕಡೆಗೆ ಹೊರಟನೇನೊ' ಎಂದು ಎಲ್ಲರೂ ಹಾಸ್ಯ ಮಾಡುತ್ತಾರೆ. ಲಗ್ಗೆಮಣೆ ಆಡುವ ಹುಡುಗರೆಲ್ಲಾ ಅತ್ತ ಇತ್ತ ಕಣ್ಣಾಡಿಸಿದರೆ ಧರ್ಮು ಮಾತ್ರ ನಾಪತ್ತೆ. "ಅಯ್ಯೊ ಧರ್ಮು ಎಲ್ಲಿ ಹೋದನೋ ಕರೆಯೊ." ಹೊರಗಡೆ ಹೋಗಿರಬೇಕು. ಬರ್ತಾನೆ. 'ಹೊಟ್ಟೇ ನೋವು ಗಿಟ್ಟೇ ನೋವು ಎಲ್ಲಾ ಬರಿ ನೆವ ಕಣೋ ಮತ್ತೇ? ಅವನ ಅಪ್ಪಯ್ಯನ್ನ ನೆನೆಸಿಕೊಂಡಾ ಅಂತ ಕಾಣ್ತದೆ ಆಗಾಗ ಎದ್ದು ಕೂತು ಅಳ್ತಿರ್ತಾನೆ. ಪಕ್ಕನೆ ಯಾರಾದ್ರು ಕಂಡ್ರೆ ಕೇಳಿದ್ರೆ ಹೊಟ್ಟೆನೋವು ತಲೆನೋವು ಅಂತ ಸುಳ್ಳು ಹೇಳ್ತಾನೆ.'[೮]

ಮಕ್ಕಳು ಈ ಸಂಭಾಷಣೆಯ ಮೂಲಕ ಧರ್ಮುವಿನ ಸಂಕಟ, ಅವರ ತಂದೆ ಮನೆ ಬಿಟ್ಟು ಹೋಗಿ ಮತ್ತೆ ವಾಪಸ್ಸು ಬರದೇ ಇರುವುದು, ಹಲವರು ಆತ ಸತ್ತು ಹೋಗಿರಬೇಕೆಂದು ಮಾತನಾಡುವುದು, ಮತ್ತೆ ಕೆಲವರ ಪ್ರಕಾರ ಧರ್ಮುವಿನ ತಂದೆ ದೊಡ್ಡಣ್ಣ ಹೆಗ್ಗಡೆಯವರು ತಿರುಪತಿ ಯಾತ್ರೆಗೆ ಹೋದವರು ಗೋಸಾಯಿಯಾಗಿದ್ದಾರೆ. ತಾಯಿ ರಂಗಮ್ಮನಂತೂ ಗಂಡನ ನೆನಪಿನಲ್ಲಿ ಸೊರಗಿ ಕೊರಗಿ ಹುಚ್ಚು ಹೆಗ್ಗಡಿತಿಯಾಗಿದ್ದಾಳೆ.

ಆಗ ಇದ್ದಕ್ಕಿದ್ದಂತೆ ಮಕ್ಕಳ ಗುಂಪು ನಿಶ್ಯಬ್ದವಾಗಿಬಿಡುತ್ತದೆ. ಎಲ್ಲರ ಮುಖದಲ್ಲಿ ಏನೋ ಸಂಕಟ ಸಹಾನುಭೂತಿಯ ಛಾಯೆ ಸುಳಿಯುತ್ತದೆ. ಆದರೆ ಅವರಲ್ಲಿ ಒಬ್ಬೊಬ್ಬರಿಗೂ ಆ ಗುಟ್ಟು ಗೊತ್ತಿತ್ತು ಎಂಬುದು ಮಾತ್ರ ಸ್ಪಷ್ಟವಾಗಿತ್ತು. ಅವರೆಲ್ಲರು ಕ್ರೀಡಾಮಗ್ನರಾಗಿರುವಂತೆ ತೋರುತ್ತಿದ್ದರೂ ಎಲ್ಲರೂ ಆ ವಿಚಾರವನ್ನು ಗುಟ್ಟಾಗಿಯೇ ಯೋಚಿಸುತ್ತಿದ್ದರು. ಆಗೊಮ್ಮೆ ಈಗೊಮ್ಮೆ ವಿಚಾರ ವಿನಿಮಯವನ್ನು ಮಾಡಿಕೊಳ್ಳುತ್ತಿದ್ದರು. ಧರ್ಮುವಿನ ಗುಣ ಸಾಮರ್ಥ್ಯಗಳಿಗೆ ಮಾತ್ರವಲ್ಲದೆ ಈ ಕಾರಣಕ್ಕಾಗಿಯೇ ಎಲ್ಲರೂ

ಅವನನ್ನು ವಿಶೇಷವಾದ ಅಕ್ಕರೆಯಿಂದ ಕಾಣುತ್ತಿದ್ದರು. ಅವನ ಮನಸ್ಸಿಗೆ ನೋವಾಗದಂತೆ ನಡೆದುಕೊಳ್ಳುತ್ತಿದ್ದರು. ನಂತರ ತನ್ನ ಕೈಯಲ್ಲಿದ್ದ ಲಗ್ಗೆಮಣೆ ಆಟದ ಚೆಂಡನ್ನು ತಿರುಗಿಸುತ್ತಾ ತಿಮ್ಮ ಅತ್ತ ಇತ್ತ ನೋಡುತ್ತಾ ಯಾವುದೋ ವಿಷಯವನ್ನು ಬಹಿರಂಗಪಡಿಸುವಂತೆ 'ಹೌದು ಕಣ್ರೋ ಅವತ್ತೊಂದು ದಿವ್ಸ ರಾತ್ರಿ ನಾವೆಲ್ಲ ಮಲಕಳ್ತೀವಲ್ಲ ಜಗಲೀಲಿ ಅಲ್ಲಿ ನೀವೆಲ್ಲ ನಿದ್ದೆ ಮಾಡಿದ್ರಿ ನಂಗೆ ಎಚ್ಚರಿತ್ತು. ಮುಕುಂದ ಚಿಕ್ಕಯ್ಯ ಧರ್ಮನ ಪಕ್ಕದಾಗೆ ಮಲಗಿಕೊಳ್ತಾರಲ್ಲ ಯಾಕೆ ಅಂತೀರಿ? ಧರ್ಮ ನಿದ್ದೆ ಮಾಡ್ತಲೆ ಎದ್ದುಬಿಡ್ತಾನೆ. ಒಂದೊಂದು ಸಾರಿ 'ಅಮ್ಮಾ, ಅಪ್ಪಯ್ಯಾ ಬಂದ್ರು ನೋಡಿಲ್ಲಿ? ಅಂತ ದಡದಡ ಹೋಗ್ತಾ ಹೇಳ್ತಾನೆ ಬಾಗಿಲು ತೆಗಿ ಅವ್ವಾ ಅಪ್ಪಯ್ಯ ಕರೀತಾನೆ' ಅಂತಾ ಎದ್ದುಬಿಟ್ಟ. ನಾನು ಚಿಕ್ಕಯ್ಯ... ಚಿಕ್ಕಯ್ಯ ಅಂತಾ ಕರಿಬೇಕು ಅಂತ ಮಾಡಿದ್ದೆ ಅಷ್ಟರಲ್ಲಿ ಅವರಿಗೆ ಪಕ್ಕನೆ ಎಚ್ಚರವಾಯ್ತು. ಎದ್ದು ಓಡಿಹೋಗಿ ಅವನನ್ನು ಹಿಡಿದುಕೊಂಡು ಬಂದು ಕೂರ್‍ಸಿ, ಎಚ್ಚರ ಮಾಡುದ್ರು. 'ಧರ್ಮ ಧರ್ಮ ಕಣ್ಣು ಬಿಡೋ. ನಾನು ಕಣೊ ನಿನ್ನ ಸಣ್ಣಭಾವ ಎಚ್ಚರ ಮಾಡಿಕೊಳ್ಳೊ ಅಂತ ಹೇಳಿ ಅವನನ್ನು ಅಳ್ಳಾಡಿಸಿ ಎಚ್ಚರ ಮಾಡಿದ್ರು.'[9]

ತಿಮ್ಮು ಹೇಳುವ ಮಾತಿನಾನುಸಾರ ಧರ್ಮುವಿಗೆ ತಂದೆಯ ಮೇಲಿನ ಅಪಾರವಾದ ಪ್ರೀತಿ ಅವನನ್ನು ಈ ಅವಸ್ಥೆಗೀಡಾಗುವಂತೆ ಮಾಡಿದೆ. ತಂದೆಯನ್ನು ಕಳೆದುಕೊಂಡ ಈ ಪೋರ ಅರ್ಧ ರಾತ್ರಿಯಲ್ಲೆಲ್ಲಾ ಕನವರಿಸುತ್ತಾನೆ. ಅಕ್ಷರಾಭ್ಯಾಸಕ್ಕಾಗಿ ಉಳಿದುಕೊಂಡ ಕೂಲಿಮಠದಲ್ಲಿ ಆತನನ್ನು ಕಾಯಲು ಮುಕುಂದಯ್ಯನು ಬಂದು ಕೆಲವು ಕಾಲ ತಂಗಿದ್ದಾನೆ. ತಂದೆ ತಾಯಿಗಳಿಲ್ಲದ ಮಕ್ಕಳ ವ್ಯಥೆ ಏನೆಂಬುದನ್ನು ಕುವೆಂಪು ಧರ್ಮುವಿನ ಮೂಲಕ ಹೇಳಿದ್ದಾರೆ.

ಈ ಲಗ್ಗೆಮಣೆ ಹುಡುಗರ ಸಂಭಾಷಣೆ ಮುಂದುವರಿದಂತೆ ತಿಮ್ಮು ಹೇಳಿ ಮುಗಿಸುವುದನ್ನೇ ಕಾಯುತ್ತಿದ್ದ 'ಕಾಡು' ಅಳುಮೊಗ ಮಾಡಿಕೊಂಡು ಹೇಳಿದನು. "ಮತ್ತೆ ! ಮತ್ತೆ ಹೇಳ್ತಿನಿ ಕೇಳ್ರೋ! ಮತ್ತೆ ಮತ್ತೆ ಉಗುಳು ನುಂಗಿಕೊಂಡು ಮುಂದುವರಿಸಿದನು. ಅವತ್ತೊಂದಿನ ಕಣ್ರೋ ನಾ ಬಾಯಿ ತಪ್ಪಿ ಹಳೆಮನೆ ಅತ್ತೆಮ್ಮನ್ನ ಎಲ್ಲರೂ ಕರಿತಾರೆ ಅಂತಾ ನಾನೂ ಬಾಯಿತಪ್ಪಿ ಅಂದೆ ಅಂತಾ ಇಟ್ಟಗೋ 'ಹುಚ್ಚು ಹೆಗ್ಗಡ್ತಿ' ಅಂತ ಅಂದ್ಬಿಟ್ಟೆ! ಧರ್ಮ ಹಿಂದುಗಡೆ ಇದ್ದದ್ದು ಮರೆತೇ ಹೋಗಿತ್ತು ಕಣೋ! ಎಂಥಾ ಕೆಲ್ಸಾ ಆಯ್ತು ಅಂತೀಯ? ಧರ್ಮ ಬಿಕ್ಕಿ ಬಿಕ್ಕಿ ಅಳಾಕೆ ಶುರು ಮಾಡಿಬಿಟ್ಟ. 'ನಾನು ದಮ್ಮಯ್ಯ ತಪ್ಪಾಯ್ತೊ ಇನ್ನೆಂದಿಗೂ ಹೇಳಾದಿಲ್ಲ ಹಾಂಗೆ'[10] ಅಂತ ತಬ್ಬಿಕೊಂಡು ದಮ್ಮಯ್ಯ ಗುಡ್ಡೆ ಹಾಕಿದ ಮ್ಯಾಲೆ ಸೊಲ್ಪ ಸಮಾಧಾನಕ್ಕೆ ಬಂದ.

ಧರ್ಮುವಿನ ಕರುಣಾಜನಕ ಕಥೆಯು 'ಕಾಡು'ವಿನ ಹೇಳಿಕೆಯಲ್ಲಿಯೂ ತುಂಗಾ ನದಿಯ ಪ್ರವಾಹದಂತೆ ಮುಂದುವರಿಯುತ್ತದೆ. ತಂದೆಯನ್ನು ಕಳೆದುಕೊಂಡ ಬಾಲಕನ ಮನಸ್ಥಿತಿಯಂತೆಯೇ ಗಂಡನನ್ನು ಕಳೆದುಕೊಂಡ ರಂಗಮ್ಮನ ಪರಿಪಾಟಲು ಹೇಳತೀರದು. ಸರ್ವಸ್ವವನ್ನು ಕಳೆದುಕೊಂಡು ರೋಗದ

ಬಾಧೆಗೆ ಒಳಗಾದ ರಂಗಮ್ಮನನ್ನು ಎಲ್ಲರೂ ಹುಚ್ಚು ಹೆಗ್ಗಡಿತಿ ಎಂದು ಕರೆಯತೊಡಗಿದರು. ನಿಜವಾಗಿಯೂ ಆಕೆಗೆ ಗಂಡನ ಪ್ರೀತಿಯ ಕೊರತೆಯಿಂದ ಹುಚ್ಚು ಹಿಡಿದಿತ್ತು ಎಂಬುದನ್ನು ಪಾಪ ಅವರೇನು ಬಲ್ಲರು. "ನೊಂದ ನೋವ ನೋಯದವರೆತ್ತ ಬಲ್ಲರು" ಎಂಬಂತೆ ರಂಗಮ್ಮ ಹೆಗ್ಗಡಿತಿಗೆ, ಎಂಟು ವರ್ಷದ ಧರ್ಮುವಿಗೆ ಬಂದೆರಗಿದ ವಿಷಮ ಪರಿಸ್ಥಿತಿಯನ್ನು ಯಾರು ತಾನೇ ಅರ್ಥ ಮಾಡಿ ಕೊಳ್ಳಬಲ್ಲರು. ಲಗ್ಗೆ ಆಟ ಪ್ರಾರಂಭಿಸಿ ವಿನೋದದಿಂದ ನಲಿಯಬೇಕಾಗಿದ್ದ ಹುಡುಗರು ಧರ್ಮುವಿನ ಪರಿಸ್ಥಿತಿ ನೆನೆದು ಮರುಗುವ ಸನ್ನಿವೇಶ ದೊಡ್ಡವರು ಮೂಗಿನ ಮೇಲೆ ಬೆರಳಿಡುವಂತೆ ಮಾಡುತ್ತದೆ. ಈಗಿನ ಪರಿಸ್ಥಿತಿಯಲ್ಲಿ ಧರ್ಮು ಸ್ವಲ್ಪ ಹೊತ್ತು ಕಣ್ಣು ತಪ್ಪಿದರೆ ಅವರಿಗೆಲ್ಲಾ ಏನೋ ಅನುಮಾನ. ಯಾವುದೋ ಹೆದರಿಕೆ. ಅವನ ಕ್ಷೇಮಕ್ಕೆ ತಾವೆಲ್ಲ ಹೊಣೆಗಾರರಾಗಿದ್ದೇವೆ ಎನ್ನುವ ಅವಿನಾಭಾವತೆಯ ಭಾವನೆ ಮೂಡುತ್ತದೆ. ಮಕ್ಕಳೆಲ್ಲಾ 'ಕದ್ದಡಗೋ ಆಟ' ಆಡುವ ಮುಚ್ಚುಮರೆಯ ಸಂಧಿಗೊಂದಿಗಳಲ್ಲೆಲ್ಲಾ ಹುಡುಕಾಡುತ್ತಾರೆ. ಕೊನೆಗೆ ರಂಗಪ್ಪಗೌಡರ ಹೆಂಡತಿಯ ಹೆರಿಗೆಯ ಸಂದರ್ಭದಲ್ಲಿ ಸೂಲಗಿತ್ತಿಯಾಗಿ ಬಂದಿದ್ದ ಹಳೆಪೈಕದ ಯಂಕಿಯನ್ನು ಇದಿರುಗೊಂಡ ತಿಮ್ಮು "ಧರ್ಮು ಎಲ್ಲಿ ಹೋದನೆ, ಎಲ್ಲಾರೂ ನೋಡಿದ್ಯೇನೆ. ನಮ್ಮ ಸಂಗಡ ಗಂಜಿ ಉಂಡು ಹೊರಗೆ ಬಂದವ ಪತ್ತೇನೆ ಇಲ್ಲ ಹುಡುಕಿ ಹುಡುಕಿ, ಕರೆದು ಕರೆದು ಸಾಕಾಯ್ತು" ಎಂದು ತನ್ನ ಮನದ ಅಳಲನ್ನು ತೋಡಿಕೊಳ್ಳುತ್ತಾನೆ. ಯಂಕಿಯು ಯಾವ ಕುತೂಹಲಾಸಕ್ತಿಯನ್ನು ತೋರದೆ ಉದಾಸೀನ ಧ್ವನಿಯಿಂದ 'ಯಾರು ಹಳೆಮನೆ ತಿರುಪತಿ ದೊಡ್ಡಯ್ಯನ ಮಗನಾ?' ನಿಮ್ಮ ಅವ್ವನ ಹೆರಿಗೆ ತಟ್ಟಿ ಕೋಣೆಲಿ ಮಾತಾಡ್ತಾ ಕೂತಾರಲ್ಲ"

ಆಗ ತಿಮ್ಮು ತನಗೆ ತಂಗಿ ಹುಟ್ಟಿರುವುದು ನೆನಪಾಗಿ ಪಕ್ಕನೆ ಹೆರಿಗೆ ತಟ್ಟಿ ಕೋಣೆಗೆ ಓಡಿದನು. ಧರ್ಮು ಗಂಜಿ ಉಂಡ ಮೇಲೆ ಇತರ ಹುಡುಗರೊಡನೆ ಆಟಕ್ಕೆ ಹೋಗದೆ ನೆಟ್ಟಗೆ ತಟ್ಟಿ ಕೋಣೆಗೆ ಹೋಗಲು ಕಾರಣ ಅತ್ತೆಮ್ಮನನ್ನು ಹೇಗಾದರೂ ಒಪ್ಪಿಸಿ ತನ್ನ ತಾಯಿಯನ್ನು ನೋಡಲು ಹಳೆಮನೆಗೆ ಹೋಗಬೇಕು ಎಂಬ ಮಹದಾಸೆ.

ಅತ್ತೆಮ್ಮ ಧರ್ಮುವನ್ನು ಸಮಾಧಾನಗೊಳಿಸಿ, ಹೋಗಪ್ಪ ಧರ್ಮು ಅಳಬೇಡ ಆಟಕ್ಕೆ ಹೋಗು ಮಜ್ಜಾನದ ಮೇಲೆ ಊಟ ಮಾಡಿಕೊಂಡು ಹೋಗಬಹುದಂತೆ. ನಾ ಹೇಳ್ತಿನಿ. ನಿನ್ನ ಸಂಗಡ ಐತನ ಕಳಿಸೋಕೆ ಹಳೆಮನೆ ತಂಕಾ ಹೋಗಿ ಬಿಟ್ಟುಬರ್ತಾನೆ ಎಂದು ಭರವಸೆ ಕೊಟ್ಟ ಮೇಲೆ ಅವನು ಸ್ವಲ್ಪ ಸಮಾಧಾನ ಗೊಂಡನು.

ಗೆಳೆಯರ ಮನಸ್ಸು ನೋಯಿಸಬಾರದೆಂದು ಧರ್ಮು ಲಗ್ಗೆ ಆಟಕ್ಕೆ ಸೇರಿದನು. ಆದರೆ ಅವನ ಮನಸ್ಸೆಲ್ಲಾ ಅವ್ವನನ್ನೇ ನೆನೆಯುತ್ತಿತ್ತು. ಲಗ್ಗೆಮಣೆಗೆ ಗುರಿ ಇಡುವಾಗಲೂ 'ಈ ಸಾರಿ ಚೆಂಡು ಲಗ್ಗೆ ಮಣೆಗೆ ಸರಿಯಾಗಿ ಗುರಿ ಬಿದ್ದು ಅದನ್ನು ಉರುಳಿಸಿದರೆ ಅಪ್ಪಯ್ಯ ಬಂದೇ ಬರ್ತಾರೆಂದು ಸಂಕಲ್ಪಿಸಿ

ಗುರಿ ಇಟ್ಟನು. ಲಗ್ಗೆಮಣೆ ಆತನು ಹಿಡಿದ ಗುರಿಗೆ ಈಡಾಗಿ ಉರುಳಿಬಿದ್ದು ಪಕ್ಕದಲ್ಲಿದ್ದವರೆಲ್ಲಾ ಜಯಘೋಷ ಮಾಡಿದಾಗ ಧರ್ಮುವು ಸಂತೋಷದಿಂದ ಕುಣಿದಾಡಿದನು. ಆದರೆ ಅವನ ಹಿಗ್ಗಿಗೆ ಕಾರಣ ಬೇರೆಯೇ ಇತ್ತು.'[೧೧]

ಕುವೆಂಪುರವರು ಗ್ರಾಮೀಣ ಸೊಗಡಿನ ಲಗ್ಗೆಮಣೆ ಆಟದ ಮೂಲಕ ಬಾಲ ಪ್ರಪಂಚದ ಇನ್ನೊಂದು ಆಯಾಮವನ್ನು ಕಟ್ಟಿಕೊಟ್ಟಿದ್ದಾರೆ. ಮಕ್ಕಳ ಮನಸ್ಸು ಪ್ರಫುಲ್ಲಗೊಳ್ಳಲು ಕ್ರೀಡೆಗಳ ಅಗತ್ಯತೆಯನ್ನು ಈ ಮಾತು ಪ್ರತಿನಿಧಿಸುತ್ತದೆ. ತಾಯಿಯನ್ನು ಕಾಣದೆ ಹೋದ ತಂದೆಯನ್ನು ಕಳಕೊಂಡ ಧರ್ಮುವಿನ ಸಂಕಟವನ್ನು, ರೋಧನವನ್ನು, ಮನೋವ್ಯಾಕುಲತೆಯನ್ನು ತಾತ್ಕಾಲಿಕವಾಗಿ ಒಂದು ಪ್ರಾದೇಶಿಕ ರೂಢಿತ ಆಟ ಮರೆಮಾಡುತ್ತದೆ. ಆಟಗಳು ಮಕ್ಕಳ ಭಾವ ಪ್ರಪಂಚವನ್ನು ಹರ್ಷ ಮತ್ತು ಉಲ್ಲಾಸದೆಡೆಗೆ ಕೊಂಡೊಯ್ಯುತ್ತದೆ.

ಕುವೆಂಪುರವರು ಮುಕುಂದಯ್ಯ, ವಾಸು, ಸೀತೆ, ಚಿನ್ನಮ್ಮರಂತಹ ಪಾತ್ರಗಳಿಗೆ ಮಾತ್ರ ಪ್ರಾಮುಖ್ಯತೆ ನೀಡದೆ, ತಳವರ್ಗದ ಜನರ ಪುಟ್ಟ, ಗಂಗ, ಐತ ಮುಂತಾದವರ ಪಾತ್ರಗಳಿಗೂ ಜೀವ ತುಂಬಿದ್ದಾರೆ. ಐತ ಧರ್ಮುವನ್ನು ಮನೆಗೆ ಕರೆದುಕೊಂಡು ಹೋಗುವ ಸನ್ನಿವೇಶದಲ್ಲಿ ಐತನ ಬಾಲ್ಯ ಜೀವನದ ಸುರುಳಿ ಬಿಚ್ಚಿಕೊಳ್ಳುತ್ತದೆ. ಧರ್ಮು ಐತನನ್ನು ಕುರಿತು ನೀನು ನನ್ನಪ್ಪನ್ನ ಗುರ್ತು ಹಿಡಿತೀಯಾ ಎಂದಾಗ, ಖಂಡಿತ ಹಿಡಿತೀನಿ. ಅವರ ಹೆಗಲ ಮ್ಯಾಲೆ ಶಿಕಾರೀಲಿ ಹುಲಿ ಗೀಚಿತ್ತು ಅಂತಿದ್ರಪ್ಪ ಒಂದು ಇಷ್ಟುದ್ದ ಇಷ್ಟಗಲ ಗಾಯದ ಕಲೆ ಇತ್ತು. ನಂಗೆ ಚೆನ್ನಾಗಿ ಗೊತ್ತು ಅದೊಂದು ದೊಡ್ಡ ಕಥೆ ಎನ್ನುತ್ತಾ ತನ್ನ ಬಾಲ್ಯದ ಕಥನವನ್ನು ಪ್ರಾರಂಭಿಸುತ್ತಾನೆ. 'ನಾನು ನಿಮ್ಮ ಹಂಗಿದ್ದೆ. ಆವಾಗ ಶಿಕಾರಿಗೆ ಹೋಗದು ಅಂದ್ರೆ ಬಾಳ ಹುಚ್ಚು. ನಿಮ್ಮ ಅಪ್ಪಯ್ಯನ ಸಂಗಡ ಮರಸಿಗೆ ಹೋಗಾಕೆ ಮುಕುಂದಯ್ಯ ಸಿದ್ಧವಾಗಿದ್ರು. ಆದ್ರೆ ದೊಡ್ಡಮ್ಮ ಅವನಿಗೆ ಎರಡು ದಿನದಿಂದ ಜ್ವರ ಬಂದು ಇವತ್ತು ಬಿಟ್ಟಿದೆ ಹೋಗಾದು ಬ್ಯಾಡಾ ಅಂದುಬಿಟ್ಟರಂತೆ. ನಾ ಮುಕುಂದಯ್ಯನ ಹತ್ರಾನೆ ತೆಣೆ ಕೆಳಗೆ ಅಂಗಳದಾಗೆ ನಿಂತಿದ್ದೆ. ನನ್ನಾರು ಕರೆದಿದ್ರೆ ಹೋಗ್ತಿದ್ನಲ್ಲಾ ಅಂತಾ ಹಾರೈಸ್ತಾ, ನಿಮ್ಮ ಅಪ್ಪಯ್ಯ ಜಗಲಿ ಮ್ಯಾಲೆ ಕೂತಿದ್ದೋರು ಹಂಗೆ ನನ್ನ ಕಡೆ ನೋಡಿದ್ರು. ನಾ ನಗ್ತಾ ನಿಂತಿದ್ದೆ ಬತ್ತಿಯೇನೋ ಮರೆಸಿಗೆ? ಅಂತಾ ಕರೆದೇಬಿಟ್ರು. ನಂಗೇನು? ಸಂತೋಷವೇ ಸಂತೋಷ. ಹೂ ಬರ್ತೀನಯ್ಯಾ ಅಂದುಬಿಟ್ಟೆ. ಹುಲಿಗಿಲಿ ಬಂದ್ರೆ ಹೆದರ್ಕೊಬಾರ್ದು. ಪಿಟ್‌ಪಿಟಕ್ಕೆನ್ನದೇ ಸುಮ್ನೆ ಕೂತ್ಗೋತಿಯಾ? ಅಂದ್ರು. ಹೂ ನಾನೇನೂ ಹೆದರೋದಿಲ್ಲ'[೧೨] ಅಂದೆ.

ಹೀಗೆ ಐತನ ಬಾಲಿಶವಾದ ಕತೆ ಮುಂದುವರಿದಿದೆ. ದೊಡ್ಡ ಹೆಗ್ಗಡೆಯವರ ಜೊತೆ ತಾನು ಮರಸಿಗೆ ಹೋದದ್ದು. ಹುಲಿ ಮತ್ತು ಹಂದಿಗಳ ಹೋರಾಟವಾಗುವಾಗ ಅವುಗಳ ಆರ್ಭಟಕ್ಕೆ ಬಾಲಕನಾಗಿದ್ದ ಐತ ಹೆದರಿ, ತನ್ನ ಬಟ್ಟೆಯೊಳಗೆ ನಿತ್ಯ ಕರ್ಮಾದಿಗಳನ್ನು ಮಾಡಿಕೊಂಡದ್ದು. ಕೊನೆಗೆ ಬೇಸರ

ಗೊಂಡರೂ ಕನಿಕರಿಸಿದ ಹೆಗ್ಗಡೆಗಳು ಐತನನ್ನು ಬಿಡಾರದ ಹತ್ತಿರ ರಾತ್ರಿಯೇ ಕರೆತಂದು, ಐತನ ತಾಯಿಗೆ (ಅಬ್ಬೆ) ಇವನ ಬಟ್ಟೆ ಮೈ ಎಲ್ಲಾ ತೊಳೆದು ಮಲಗಿಸಿಕೊ ಅಸಹ್ಯ ಮಾಡಿಕೊಂಡಾನೆ ಅಂತ ಹೇಳಿ ಹೋಗಿದ್ದು. ಎಲ್ಲ ವಿಷಯವನ್ನು ಐತ ತನ್ಮಯನಾಗಿ ಧಾರಾವಾಹಿಯಂತೆ ಧರ್ಮುವಿಗೆ ಹೇಳುತ್ತಾನೆ. ಪಾಪ ಐತನೂ ಬಾಲಕನಾಗಿದ್ದಾಗ ತನ್ನ ತಂದೆಯನ್ನು ಕಳೆದುಕೊಂಡಿದ್ದ. ತನ್ನ ತಂದೆಯನ್ನು ಸರಿಯಾಗಿ ಗುರುತಿಸಲು ಅಸಾಧ್ಯವಾದ ಆ ಹುಡುಗ ಐತ ಇಂದು ದೊಡ್ಡವನಾಗಿ ತನ್ನದೇ ತೆರನಾದ ನೋವಿನಲ್ಲಿರುವ ಧರ್ಮುವಿನ ತಂದೆಯನ್ನು ಗುರುತಿಸುವಲ್ಲಿ ನೆರವಾಗುತ್ತಾನೆ. ಅದೆಂತಹ ಬಾಂಧವ್ಯ ಶಿಶುತನದಲ್ಲಿದೆ ಎಂಬುದನ್ನು ನಾವು ಅರಿಯಬೇಕಾಗಿದೆ.

ಕುವೆಂಪು ತಮ್ಮ ಕಾದಂಬರಿಗಳಲ್ಲಿ ಮಕ್ಕಳ ಪಾತ್ರಗಳನ್ನು ಎಷ್ಟು ತನ್ಮಯವಾಗಿ ಚಿತ್ರಿಸುತ್ತಾರೆಂದರೆ ಆ ಪಾತ್ರಗಳ ಸೃಷ್ಟಿಯಲ್ಲಿ ಹಾಸ್ಯ, ಲೇವಡಿ ಎಲ್ಲವುಗಳ ರಸಕವಳವನ್ನು ತುಂಬಿಸುತ್ತಾರೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಮಕ್ಕಳ ಗುಂಪನ್ನು ಕಟ್ಟಿ ಅವರ ಮುಖಾಂತರ ಮಲೆನಾಡಿನ ಜನಜೀವನವನ್ನು ಒರೆಗೆ ಹಚ್ಚುತ್ತಾರೆ. ಪ್ರಾದೇಶಿಕ ಸೊಗಡು, ಜಾತೀಯತೆ ಮೊದಲಾದ ವಿಚಾರಗಳು ದೊಡ್ಡವರಷ್ಟೇ ಮಕ್ಕಳಿಗೂ ತಿಳಿದಿರುತ್ತದೆ ಎಂಬುದನ್ನು ಕುವೆಂಪು ಸಾಕಷ್ಟು ಕಡೆ ಸಾಕ್ಷಿ ಸಮೇತ ತೋರಿಸಿ ಕೊಟ್ಟಿದ್ದಾರೆ.

ತಾಯಿಯನ್ನು ನೋಡಲು ಹೊರಟ ಧರ್ಮು ಅಜ್ಜಮ್ಮ, ಅತ್ತೆಮ್ಮ ದೊಡ್ಡ ಮಾವ, ಸಣ್ಣ ಮಾವರಿಂದ ಬೀಳ್ಕೊಂಡು ಐತನ ಜೊತೆ ಹೊರಟಾಗ, ಆತನನ್ನು ಕಳಿಸಿ ಬರಲು ತಿಮ್ಮು, ಕಾಡು ಮುಂತಾದ ಜೊತೆಯ ಹುಡುಗರು ಹೊರಡುತ್ತಾರೆ. ಎದುರಿಗೆ ಬರುತ್ತಿದ್ದ ಪೀಂಚಲುವನ್ನು ಕಂಡ ತಿಮ್ಮು 'ನೀನು ಹೊಗ್ತೀಯೇನೆ ಐತನ ಸಂಗಡ ಧರ್ಮುನ ಕಳಿಸಾಕೆ' ಎಂದು ನಗುತ್ತಾ ಕೇಳುತ್ತಾನೆ. ಅವಳು ನಾಚುತ್ತಾ ಸರಿದು ನಿಂತು ಈ ತಿಮ್ಮಯ್ಯನಿಗೆ ಯಾವಾಗಲು ಚಾಷ್ಟೇನೆ ಎಂದು ಮುನಿಸು ತೋರಿಸುತ್ತಾಳೆ. ಧರ್ಮುವನ್ನು ಕಳಿಸಿ ಕೊಡಲು ಹಳ್ಳದವರೆಗೂ ಬರ್ತೇವೆ ಎಂದ ಮಕ್ಕಳು ಆತನನ್ನು ಬಿಟ್ಟು ಹೋಗಲಾರದೆ ಮತ್ತೆ ಮುಂದುವರೆಯಲು ಪ್ರಯತ್ನಿಸುತ್ತಾರೆ. ಆಗ ಐತ ಹಳ್ಳ ಬಂತಲ್ಲ ತಿಮ್ಮಯ್ಯ ಎಂದು ಅವರೆಲ್ಲರು ಹಿಂತಿರುಗುವುದಕ್ಕೆ ಸೂಚನೆಯನ್ನು ಕೊಟ್ಟಿದ್ದ. ಆದರೆ ಕಾಡು ಆ ಅರೆಕಲ್ಲಿನವರೆಗೆ ಬರ್ತೀವಿ ಎಂದು ಅಂಗಲಾಚಿ ಮುಂದುವರೆದಿದ್ದನು. ಅದೂ ಸಮೀಪಿಸಿದಾಗ ಮಕ್ಕಳು ದೂರ ಬರಲು ಕೇಳಿಕೊಳ್ಳುತ್ತವೆ. ಆಗ ಐತ 'ಆಮ್ಯಾಲೆ ನನ್ನ ಬೈತಾರೆ ಕಣ್ರೋ ಅಮ್ಮ, ಹುಡುಗುರ್ನಾ ಅಷ್ಟು ದೂರ ಯಾಕೆ ಕರುಕೊಂಡು ಹೋದೆ ಅಂತಾ. ನಿಮ್ಮ ದಮ್ಮಯ್ಯಾ ಅಂತೀನ್ರೋ ಮನಿಗ್ ಹೋಗಿ. ಈಗ ಬೈಗಾಗಿ ಬಿಟ್ಟದೇ' ಎಂದನು. ಮನಸ್ಸಿಲ್ಲದ ಮನಸ್ಸಿನಿಂದ ಐತನ ವಿರೋಧದ ನಡುವೆ ಧರ್ಮು ಹೋಗಿ ಬರ್ತೀಯ ಎಂದು ನಾಲ್ಕಾರು ಬಾಲವಾಣಿಗಳು ಕೀರಲು ಧ್ವನಿಯಲ್ಲಿ ಕೂಗಿ ಬೀಳ್ಕೊಂಡು ಮನೆಗೆ ಹಿಂತಿರುಗಿದವು.

ಕಲ್ಲೂರು ಮಂಜಭಟ್ಟರು, ಅವರ ಪೂಜಾ ವಿಧಾನಗಳು, ಆಚರಣೆ, ಅವರ ಮನೆಯ ಪರಿಸ್ಥಿತಿ ಪರಿಸರವನ್ನು ಮಕ್ಕಳು ವೀಕ್ಷಿಸುವುದು ಕುತೂಹಲಕಾರಿಯಾಗಿದೆ. ಮಂಜಭಟ್ಟರ ಮನೆಯನ್ನು ಅವರ ಉಪಚಾರವನ್ನು ಮೊದಲೇ ತಿಳಿದಿದ್ದ ತಿಮ್ಮು ತನ್ನ ಗೆಳೆಯರಿಗೆ ಅದರ ಪರಿಚಯವನ್ನು ಹೀಗೆ ಮಾಡಿ ಕೊಡುತ್ತಾನೆ.

"ಹೌದು ಕಣೋ! ಅದೇ ಹೊಳೆ ದಂಡೆಯಲ್ಲಿ ಕಾಣ್ತಾ ಇದೆಯಲ್ಲಾ? ದೊಡ್ಡಮನೆ? ಅರ್ಧ ಮಂಗಳೂರು ಹೆಂಚು, ಅರ್ಧ ಓಡು ಹೆಂಚು ಹೊದಿಸಿದ್ದು, ಅದೇ ಕಲ್ಲೂರು ಸಾಹುಕಾರ ಮಂಜಭಟ್ಟರ ಮನೆ ಕಣೋ" ಉಳಿದ ಇಬ್ಬರಿಗಿಂತಲೂ ವಯಸ್ಸಿನಲ್ಲಿ ಹಿರಿಯನಾಗಿ ಹಿಂದೆ ಒಂದೆರಡು ಸಾರಿ ತನ್ನ ಅಪ್ಪಯ್ಯ ಬೆಟ್ಟಳ್ಳಿ ಕಲ್ಲಯ್ಯರೊಡನೆ ಅಲ್ಲಿಗೆ ಬಂದಿದ್ದು, ಸ್ಥಳ ಪರಿಚಯ ಪಡೆದದ್ದು – ಹೀಗೆ ಕಾಡು ಹೇಳುತ್ತಾ ಮುಂದುವರಿದನು. 'ಅಪ್ಪಯ್ಯನ ಸಂಗಡ ಒಂದು ತೇರಿಗೆ ಬಂದಿದ್ದೆ ಕಣೊ. ಆಗ ಆ ಭಟ್ಟರ ಮನೇಲೆ ಊಟ ಮಾಡಿದ್ದು ನಾವು. ಹೋಳಿಗೆ ಪಾಯಸ ಏನೇನೋ ಇಕ್ಕಿದ್ರು ಕಣೋ! ಆದರೆ ಮನೆ ಒಳಗೆ ಬಳ್ಳೆ ಹಾಕಿರಲಿಲ್ಲ. ಹೊರಂಗಳದ ತೆಣೆ ಮೂಲೆಯಲ್ಲಿ ಹಾಕಿದ್ರು! ಅಪ್ಪಯ್ಯನೇ ನನ್ನ ಬಳ್ಳೆಯನ್ನು ಎತ್ತಿಹಾಕಿ ಅವರೇ ಅಲ್ಲೆಲ್ಲಾ ಗೋಮಯಾನು ಹಾಕಿದ್ರು! ನಂಗೆ ಇಸ್ಸೀ ಎನಿಸಿಬಿಟ್ಟಿತ್ತು. ಇನ್ನು ಎಂದೆಂದಿಗೂ ಅವರ ಮನೆಯಲ್ಲಿ ಊಟ ಮಾಡಬಾರದೂ ಅಂತಾ ಮಾಡಿಬಿಟ್ಟೇನಿ.' ಅದಕ್ಕೆ ತಾಯಿ ದೊಡ್ಡಮ್ಮ ಹೆಗ್ಗಡಿತಿಯವರು ಸಾಕು ಬಿಡೋ ಮತ್ತೇನು ಬಿರಾಂಬ್ರ ಮನೆಯಲ್ಲಿ ಗೌಡರನ್ನ ಒಳಗೆ ಕೂರಿಸಿ ಇಕ್ತಾರೆಂತಾ ಮಾಡೀಯೇನೋ? ನಮ್ಮನೇಲಿ ಆ ಕಿಲಿಸ್ತರ ಉಪದೇಶಿ ಬರ್ತಾನಲ್ಲಾ ಅವನ್ನ ಒಳಗೆ ಕೂರ್ಸಿ ಊಟ ಹಾಕ್ತೀವೇನು? ಹಂಗೇನೆ ಬಿರಾಂಬ್ರ ಮನೇಲಿ ನಮ್ಮನ್ನೆಲ್ಲಾ ಹೊರಗೇ ಕೂರ್ಸಿ ಇಕ್ತಾರೆ ಎಂದು ಬ್ರಾಹ್ಮಣ ಸಮರ್ಥನೆ ಮಾಡಿದರು. 'ಆದ್ರೆ? ದೇವಣ್ಣಯ್ಯ ಉಪದೇಶಿ ಜೊತೆಯಲ್ಲೇ ಕೂತು ಉಣ್ತಾನಲ್ಲ ಹಂಗೆ ಆ ಭಟ್ಟರ ಮಗ ಯಾಕೆ ಕೂರಬಾರ್ದಾಗಿತ್ತು ಉಣ್ಣಾಕೆ ನಮ್ಮ ಜೊತೇಲಿ?' ಪ್ರತಿಭಟಿಸಿತ್ತು ಕಾಡಣ್ಣನ ತರ್ಕವಾಣಿ.

ಮಕ್ಕಳೆಲ್ಲರು ಕೈಕಾಲು ಮುಖ ತೊಳೆಯುವುದಕ್ಕೆ ಹೊಳೆಗೆ ಇಳಿಯುತ್ತಿದ್ದಾಗ ಮೆಟ್ಟಿಲುಗಳ ಮೇಲೆ ಇಳಿಯುತ್ತಿದ್ದ ಹೆಂಗಸನ್ನು ಕಂಡು 'ಏ ಬದಿಗೆ ನಿಂತುಕೊಳ್ಳೋ ಮಡಿಯಮ್ಮ ಬರ್ತಾ ಇದ್ದಾರೆ' ಎಂಬ ಆಜ್ಞಾಧ್ವನಿಯನ್ನು ಕೇಳಿ ಕಾಡು ತನ್ನ ಗೆಳೆಯರಿಬ್ಬರನ್ನು ಪಕ್ಕಕ್ಕೆ ಎಳೆದುಕೊಂಡು ನಿಂತ. ತಿಮ್ಮು ಮೆಲ್ಲನೆ ಆ ಹೆಂಗಸನ್ನು ಕುರಿತು ಯಾರೋ ಅದು ಗಂಡಸೋ ಹೆಂಗಸೋ ಎಂದು ಕೇಳುತ್ತಾನೆ. ಅದಕ್ಕೆ ಕಾಡು ಹೆಂಗಸು ಕಣೋ. ಬೋಳು ಹಾರ್ತಿ. ಅವಳ ಕಡೆ ನೋಡ ಬ್ಯಾಡ್ವೋ ಬೈತಾಳಂತೆ ಎಂದು ಹೇಳುತ್ತಾನೆ. ಬ್ರಾಂಬ್ರಲ್ಲಿ ಗಂಡ ಸತ್ತ ಮುಂಡೆಯರಿಗೆ ಹೀಗೆ ಮಂಡೆ ಬೋಳಿಸುತ್ತಾರೆ ಎಂದು ಹೇಳುತ್ತಲೇ ಶೂದ್ರ ಸಂಪ್ರದಾಯದ ಮಕ್ಕಳು ಪುರೋಹಿತ ಸಂಪ್ರದಾಯದ ಸ್ತ್ರೀ ಶೋಷಣೆಯನ್ನು ವಿರೋಧಿಸುತ್ತಾರೆ.

ಬ್ರಾಹ್ಮಣರ ಮನೆಯ ಪರಿಸರವನ್ನು ಕುರಿತು ಮಕ್ಕಳು ಮಾತನಾಡುವ ಶೈಲಿ ನಮ್ಮನ್ನು ಬೆರಗುಗೊಳಿಸುತ್ತದೆ. ಇದೇನೋ ಇಲ್ಲಿ ಇಷ್ಟೊಂದು ಕಾಗೆ ಹಿಂಡು. ನಮ್ಮ ಮನೆಯ ಹತ್ರಾ ಹುಡುಕಿದರೂ ಸಿಗದು ಅಪರೂಪ ಎನ್ನುವ ಮಾತಿಗೆ, ಮತ್ತೊಬ್ಬನ ಉತ್ತರ ಹಾರುವರ ಮಕ್ಕಳು ಇದ್ದಲ್ಲಿ ಹಂಗೆ ಕಣೊ ಕಾಗೆ ನಾಯಿ ಹಿಂಡೇ ಇರ್ತಾವೆ. ಚಂದಾಗಿ ತಿಂದು ಬಿಸಾಡ್ತಾರೆ ನೋಡು ಅದಕ್ಕೆ.

ಮಕ್ಕಳ ಮಾತುಗಳು ಅಷ್ಟಕ್ಕೆ ಸುಮ್ಮನಿರದೆ ಪುರೋಹಿತ ವರ್ಗದ ಸ್ತ್ರೀಯರ ವೇಷಭೂಷಣಗಳನ್ನು ಕುರಿತು ವ್ಯಂಗ್ಯ ಮಾಡುತ್ತವೆ. ತನ್ನ ತಾಯಿ ಮುಂತಾದವರ ಗೊಬ್ಬೆ ಸೆರಗಿನ ಮಲೆನಾಡಿನ ಉಡುಗೆಯನ್ನೇ ನೋಡಿ ಅಭ್ಯಾಸವಾಗಿದ್ದ ತಿಮ್ಮುಗೆ ಹಾರುವರ ಉಡುಗೆಯ ರೀತಿ ವಿನೋದಕರವಾಗಿ ಕಾಣುತ್ತದೆ. ಅದರಲ್ಲಿಯೂ ಕಚ್ಚೆ ಹಾಕಿದಂತೆ ಸೀರೆ ಉಟ್ಟಿದ್ದವರನ್ನು ನೋಡಿ ಅವರಿಗೆ ನಗು ತಡೆಯಲಾಗಲಿಲ್ಲ. ಏನೋ ಕಾಡಣ್ಣಯ್ಯ ಗಂಡಸರ ಹಾಗೆ ಕಚ್ಚೇ ಹಾಕಿದ್ದಾರಲ್ಲೋ ಥೂ! ಎಂದು ಪಿಸುಗುಟ್ಟಿದ್ದರು. ಅದೊಂಥರ ಬಿರಾಂಬರ ಉಡುಗೆ ಕಣೋ ಎಂದು ಪಿಸುಗುಟ್ಟಿದ್ದನು. ಇವರು ನೋಡುತ್ತಿದ್ದಂತೆಯೇ ಒಬ್ಬಳು ಬಾಹ್ಮಣ ಯುವತಿ ಒಳ್ಳೆ ಸೀರೆಯನ್ನು ಉಟ್ಟು ಅಲಂಕಾರವಾಗಿದ್ದವಳು ಕೃಶಳಾಗಿದ್ದು ಟೊಂಕ ತಿರುಪಿದಂತೆ ಕಾಲು ಹಾಕಿ ಕೂರುತ್ತಿದ್ದಳು. ಅವಳನ್ನು ನೋಡಿದ ತಿಮ್ಮು ಕಾಡುವನ್ನು ಕುರಿತು ಅದು ಯಾರೋ ಆ ಹೆಂಗಸು. ಪಾಪ ಏನಾಗಿದೆಯೋ ಅವಳಿಗೆ ಎಂದು ಕೇಳುತ್ತಾನೆ. ಅದು ಮಂಜಭಟ್ಟರ ಸೊಸೆ ಅಂತೆ ಕಣೋ. ಅವಳನ್ನೇ ಅತ್ತೆ ಮಾವ ಸೇರಿಕೊಂಡು ಹೊಡೆದು ಬಡೆದೂ ಕಾಲು ತಿರುಪಿ ಹಾಕಿದ್ದು. ಅವನೇ ಕಣೊ ಅವಳ ಗಂಡನಂತೆ. ನಾರಾಯಣ ಭಟ್ಟ ಅಂತೆ ಕಣೊ ಅವನ ಹೆಸರು. ಅಂವಾ ಇವಳನ್ನು ಬಿಟ್ಟು ಕಿಟ್ಟ ಐತಾಳನ ಹೆಂಡ್ತಿನ ಇಟ್ಕೊಂಡಿದ್ದಾನಂತೆ.

ಚಿನ್ನಮ್ಮನ ಮದುವೆ ಸಂದರ್ಭದಲ್ಲಿ ಮಕ್ಕಳ ಹುಡುಗಾಟಿಕೆ ಮತ್ತು ವಿನೋದಗಳು ಚನ್ನಾಗಿ ಮೂಡಿಬಂದಿವೆ. ಮೂವರು ಹಸೆಗೋಡೆ ಬರೆದಿದ್ದ ಎಡೆಗೆ ಹೋಗಿ ಅದನ್ನು ಮೆಚ್ಚಿ ನೋಡಿದರು. ಅಲ್ಲಿ ಬರೆದಿದ್ದ ಎಲೆ ಹಲಸಿನದೋ ಮಾವಿನದೋ ಎಂದು ಚರ್ಚೆಯನ್ನೂ ನಡೆಸಿದರು. ತಿಮ್ಮು ಕೈ ಬೆರಳಿನಿಂದ ಉಜ್ಜಿ ನೋಡಿ 'ಅಯ್ಯೋ ಗಟ್ಟಿ ಬಣ್ಣ ಅಲ್ಲೋ ಕಣೋ ನೋಡಿಲ್ಲಿ ಕೈಗೆ ಹೆಂಗೆ ಹಿಡಿದದಾ ಈ ಹಸುರು' ಎಂದು ಟೀಕಿಸಿದನು.

ಅಲ್ಲಿಂದ ಮೂವರು ಇದ್ದಕ್ಕಿದ್ದಂತೆ ವಾಲಗದ ಸದ್ದು ಕೇಳಿಬರುತ್ತಿದ್ದ ಕೆಳ ಗರಡಿಯ ಮೂಲೆಗೆ ಧಾವಿಸಿದರು. ವಾಲಗ ಊದುತ್ತಿದ್ದವರು ಹೊಲೆಯರಾಗಿದ್ದರೂ ಮಳೆಯ ದೆಸೆಯಿಂದಾಗಿ ಅವರಿಗೆ ಮನೆಯೊಳಗೆ ಕೆಳಗರಡಿಯ ಒಂದು ಮೂಲೆಯನ್ನೇ ಬಿಟ್ಟುಕೊಟ್ಟಿದ್ದರು. ಇದ್ದಕ್ಕಿದ್ದಂತೆ ಹಾಗೆ ತಿಮ್ಮು ಕಣ್ಣು ಕೀಲಿಸಿ ವಾಲಗ ಊದುತ್ತಿದ್ದವನೊಬ್ಬನ ಮುಖವನ್ನೇ ದಿಟ್ಟಿಸತೊಡಗಿದನು. ಅವನಿಗೆ ಆ ಮುಖ ತನಗೆ ಪರಿಚಯವಾಗಿದ್ದ ಯಾರದ್ದೋ ಒಂದು ಮುಖವನ್ನು ನೆನಪಿಗೆ ತರುತ್ತಿತ್ತು. ಕಾಡಣ್ಣಯ್ಯ ಅವನನ್ನ

ನೋಡಿದ್ರೇ ಹಳೇ ಮನೆ ಬೈರ ಕಂಡ್ಹಾಂಗೆ ಕಾಣ್ತದಲ್ಲೇನೋ. ಕಾಡುನ ಕಿವಿಯಲ್ಲಿ ಪಿಸ ಪಿಸ ನುಡಿದನು ತಿಮ್ಮು.

ಅವನು ಹಳೆಮನೆ ಬೈರ, ಅವನ ಕೈಯ್ಯಲ್ಲಿ ವಾಲಗ ಊದಿಸ್ತಾರೇನೋ ಯಾರಾದ್ರು ಎಂದನು. ತಿಮ್ಮು ಆಗಲೇ ನಗುತ್ತಿದ್ದ ಧರ್ಮನ ಕಡೆಗೆ ತಿರುಗಿ ಪಿಸುಗುಟ್ಟಿದನು. ಅವ ನಿಮ್ಮ ಹೊಲೆಯರ ಬೈರನ ಹಂಗೆ ಇಲ್ಲೇನೋ ಧರ್ಮು ಭಾವ. ಧರ್ಮುಗೆ ಆಗಲೇ ಗೊತ್ತಾಗಿತ್ತು. ಅಷ್ಟು ಶೋಕಿಯಾಗಿ ಕುಳಿತು ಅತ್ತಿತ್ತಾ ತಲೆಯಾಡಿಸಿ ವಾಲಗ ಊದುತ್ತಿದ್ದವರು ತಮ್ಮ ಮನೆಯ ಹೊಲಗೇರಿಯ ಮಂಜ, ತಿಮ್ಮ, ಸಿದ್ದ, ಬೈರ ಎಂದು. ಥೂ ಹೊಲೆಯರ ಕೈಲಿ ಯಾರಾದ್ರು ಮದುವೆ ಮನೆ ವಾಲಗ ಊದಿಸ್ತಾರೇನೋ? ಅಲ್ವೇನೋ ಧರ್ಮು. ತಿಮ್ಮುವಿಗೆ ತುಂಬಾ ಅವಮಾನವಾದಂತಾಯಿತು. ಕೀಳು ಜಾತಿಯ ಹೊಲೆಯನಾದ ದನ ಕಾಯುವವನಾದ ಗೊಬ್ಬರ ಗಿಬ್ಬರ ಹೊತ್ತು ಗದ್ದೆ ತೋಟಗಳಲ್ಲಿ ತಾವು ಹೇಳಿದಂತೆ ಕೆಲಸ ಮಾಡಿ ಕೊಂಡಿರುವ ಬಾಡು ತಿನ್ನುವ ಜೀತದಾಳೊಬ್ಬನ ಮುಂದೆ ಅವನು ಊದುತ್ತಿದ್ದ ವಾಲಗವನ್ನು ಬೆರಗಾಗಿ ಬೆಚ್ಚಿ ಆಲಿಸುತ್ತಿದ್ದದು, ತನ್ನ ಗೌಡಿಕೆಯ ಗೌರವಕ್ಕೆ ಮಸಿ ಬಳಿದುಕೊಂಡಂತಾಯಿತಲ್ಲ ಎಂದು ಮುಖ ಸಣ್ಣಗೆ ಮಾಡಿಕೊಂಡನು. ಥೂ ಬನ್ರೋ ಈ ಬಾಡು ತಿನ್ನೋರ ವಾಲಗ ಏನು ಕೇಳಾದು ಅಂದವನೇ ಕಾಡು, ಧರ್ಮು ಇಬ್ಬರನ್ನು ರಟ್ಟೇ ಹಿಡಿದೆಳೆದು ಅಲ್ಲಿಂದ ಹೊರಡುತ್ತಾನೆ. ಹೀಗೆ ಮಕ್ಕಳ ಕಥನ ಸಾಗುತ್ತದೆ.

## ಕೊನೆ ಟಿಪ್ಪಣಿಗಳು

೧) ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೨೦೦೪, ಪುಟ ೦೩

೨) ಅದೇ, ಪುಟ ೨೮

೩) ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೭, ಪು೭೧

೪) ಅದೇ, ಪುಟ ೭೪

೫) ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೨೦೦೪, ಪುಟ ೪೮

೬) ಅದೇ, ಪುಟ ೫೫

೭) ಅದೇ, ಪುಟ ೫೭

೮) ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ೧೯೯೭, ಪುಟ ೨೪೮

೯) ಅದೇ, ಪುಟ ೨೪೯

೧೦) ಅದೇ, ಪುಟ ೨೪೯

೧೧) ಅದೇ, ಪುಟ ೨೪೩

೧೨) ಅದೇ, ಪುಟ ೩೩೨

# ಅಧ್ಯಾಯ ೨

# ಬಾಲ ಪ್ರಪಂಚದಲ್ಲಿನ ಪಾತ್ರಗಳ ವೈಶಿಷ್ಟತೆ

**ವಾಸು :**

ವಾಸು ಕುವೆಂಪು ಕಾನೂರು ಹೆಗ್ಗಡಿತಿಯಲ್ಲಿ ಸೃಷ್ಟಿಸಿರುವ ಒಂದು ವಿಶೇಷವಾದ ಪಾತ್ರವಾಗಿ ಗೋಚರಿಸುತ್ತಾನೆ. ವಾಸು ಕಾನೂರು ಚಂದ್ರಯ್ಯಗೌಡರ ಎರಡನೆ ಹೆಂಡತಿಯ ಮಗ. ಚಂದ್ರಯ್ಯ ಗೌಡರ ಮೊದಲನೆಯ ಹೆಂಡತಿ ರಾಮಯ್ಯನ ತಾಯಿ ತೀರಿಕೊಂಡ ನಂತರ ಅವರು ಎರಡನೆ ವಿವಾಹ ವಾದರು. ಎರಡನೆಯ ಹೆಂಡತಿ ಪುಟ್ಟಮ್ಮ, ವಾಸು ಇಬ್ಬರನ್ನು ಹೆತ್ತು, ಮೂರನೆಯ ಹೆರಿಗೆಯಲ್ಲಿ ಶಿಶು ಸಮೇತ ತೀರಿಹೋಗಿದ್ದರು. ತಾಯಿಯಿಲ್ಲದ ಈ ಹಸುಗೂಸುಗಳು ಅನಿವಾರ್ಯವಾಗಿ ಮಲತಾಯಿ ಯಾದ ಸುಬ್ಬಮ್ಮನ ಜೊತೆ ಹೆಣಗಾಡಬೇಕಾಗುತ್ತದೆ.

ವಾಸು ಹಿಂದಿನ ದಿನ ಬೆಣ್ಣೆ ಕದ್ದು ತಿಂದ ತುಂಟ. ಏನೂ ಅರಿಯದ ಕೂಸಿನಂತೆ ಚಿಕ್ಕಮ್ಮ ನೀಡಿದ್ದ ಉಪ್ಪಿಟ್ಟನ್ನು ಬಾಲೆ ಎಲೆಯ ಮುಂದೆ ಕೂತು ಅನ್ಯಮನಸ್ಕನಾಗಿ ಮುಕ್ಕುತ್ತಿದ್ದ. ವಾಸು ನಿನ್ನೆ ಬೆಣ್ಣೆ ಕದ್ದಿದ್ದು ಹೇಳಲೇನು? ಎಂದು ದೊಡ್ಡಮ್ಮ ವಾಣಿ ಕೇಳಿದಾಗ ಅದು ಯಾರದೆಂದು ತಿಳಿಯದೆ ಬೆಚ್ಚಿಬಿದ್ದ. ತಲೆಯೆತ್ತಿ ನೋಡುತ್ತಾನೆ. ಕಡೆಗೋಲು ಕಂಬವು ಅವನನ್ನೇ ದುರು ದುರು ನೋಡುವಂತೆ ಭಾಸ ವಾಗುತ್ತದೆ. ವಾಸುವಿಗೆ ದಿಗಿಲಾಗಿ ನಾನು ಬೆಣ್ಣೆ ಕದ್ದು ತಿನ್ನುವುದನ್ನು ಯಾರು ನೋಡಿದ್ದರು ಎಂದು ಚಿಂತಿಸತೊಡಗುತ್ತಾನೆ. ತನಗೆ ಕೇಳಿಸಿದ ಆ ಧ್ವನಿ ತನ್ನ ಅಜ್ಜಮ್ಮನ ಧ್ವನಿಯಂತೆ ವಾಸುವಿಗೆ ಭಾಸ ವಾಗುತ್ತದೆ. ಅಜ್ಜಮ್ಮನೇ ಸತ್ತ ಬಳಿಕ ಕಡೆಗೋಲು ಕಂಬದಲ್ಲಿ ಅಡಗಿಕೊಂಡು ಮಾತನಾಡುತ್ತಿರುತ್ತಾರೆಂದು ಊಹಿಸುತ್ತಾನೆ. ಸತ್ತ ಹಿರಿಯರು ಒಂದಿಲ್ಲೊಂದು ಅವಸ್ಥೆಯಲ್ಲಿ ಬದುಕಿರುವ ಜನರ ನಡುವೆಯೇ ಇರುತ್ತಾರೆ. ದೈನಂದಿನ ಚಲನವಲನಗಳನ್ನು ವೀಕ್ಷಿಸುತ್ತಿರುತ್ತಾರೆ ಎಂಬ ಹಿರಿಯರ ಮಾತಿಗೆ ವಾಸುವಿನ ಆಲೋಚನೆಗಳೂ ಕಾಕತಾಳೀಯ ಎಂಬಂತೆ ಜೋಡಣೆಯಾಗಿವೆ. 'ಅಜ್ಜಮ್ಮ ನಿನ್ನ ದಮ್ಮಯ್ಯ! ಹೇಳ ಬೇಡ ಚಿಕ್ಕಮ್ಮ ಇಲ್ಲೇ ನಿಂತಿದೆ' ಎಂದು ಹೇಳಿ ಅವನು ಉಪ್ಪಿಟ್ಟು ಮುಕ್ಕುವ ಕಾಯಕವನ್ನು ಮುಂದು ವರೆಸುತ್ತಾನೆ.

ಚಿಕ್ಕಮ್ಮನ ಬಗೆಗಿದ್ದ ತಾತ್ಸಾರಕ್ಕೆ ಕಾರಣ ಅವಳು ವಾಸುವನ್ನು ನೋಡಿಕೊಳ್ಳುತ್ತಿದ್ದ ರೀತಿ. ಎಲ್ಲ ವನ್ನು ಕುವೆಂಪು ವಾಸುವಿನ ಈ ಒಂದೆ ಒಂದು ಮಾತಿನಲ್ಲಿ ಹೇಳಿಬಿಡುತ್ತಾರೆ. ವಾಸುವಿನ ಮುಗ್ಧತೆ ಅವನ ದೇಹ ಚರ್ಯೆಯನ್ನು ನಾಗಮ್ಮನ ಮೂಲಕ ಕುವೆಂಪು ಹೇಳಿಸಿಬಿಡುತ್ತಾರೆ. ಅಣ್ಣಂದಿರಂತೆಯೇ ಕ್ರಾಪು ಬಿಡುತ್ತೇನೆಂದು ಅನ್ನುತ್ತಿದ್ದ ವಾಸುವಿನ ತಲೆಯಲ್ಲಿ ಕೂದಲು ಜುಟ್ಟಿಗೂ ಕ್ರಾಪಿಗೂ ಮಧ್ಯಸ್ಥವಾಗಿ

ಕ್ರಾಂತಿಯಾದಂತಿತ್ತು. ಆ ಕೇಶ ಪಾಶಗಳಲ್ಲಿ ಒಂದು ಪಟಾಲ ಅವನ ಎಡಗಡೆಯ ನಡುಗಪ್ಪು ಕಿವಿಗಳನ್ನು ಜೇನುಹಟ್ಟಿಯನ್ನು ಹುಳುಗಳು ಮುತ್ತುವಂತೆ ಮುತ್ತಿದ್ದವು. ಗುಂಡಿಗಳೆಲ್ಲ ಗಡಿಪಾರಾಗಿದ್ದ ಷರಟು 'ಆ' ಎಂದು ಬಾಯ್ದೆರೆದು ಬೀದಿಯ ಹುಚ್ಚನಂತೆ ಅಸ್ತವ್ಯಸ್ತವಾಗಿತ್ತು. ಅದರ ಮೇಲಿದ್ದ ಕೊಳೆ ಭಾರವು ಒಂದು ಘಟ್ಟಿ ಸಾಬೂನಿಗೆ ಬೆವರು ಕೀಳಿಸುವಂತಿತ್ತು. ಅವನುಟ್ಟಿದ್ದ ಅಡ್ಡಪಂಚೆಯೂ ಷರಟಿನ ಸಂಗಾತಿಯಾಗುವುದಕ್ಕೆ ಯೋಗ್ಯವಾಗಿಯೇ ಇತ್ತು.

ವಾಸು ಎಲೆಯಲ್ಲಿದ್ದ ಉಪ್ಪಿಟ್ಟನ್ನು ಮುಕ್ಕಿ ಪೂರೈಸಿ ಚಿಕ್ಕಮ್ಮ ಮತ್ತಿಷ್ಟು ಉಪ್ಪಿಟ್ಟು ಎಂದು ಕೂಗಿದನು. ಆದರೆ ಮಲತಾಯಿಯಾದ ಸುಬ್ಬಮ್ಮ "ಏನು ಹೊಟ್ಟೇನೋ ನಿನ್ದೂ? ಉಪ್ಪಿಟ್ಟಿಲ್ಲ" ಎಂದು ಕೆಕ್ಕರಿಸುತ್ತಾಳೆ. ಮಕ್ಕಳಿಲ್ಲದ ಬಂಜೆ ಮಕ್ಕಳ ಮನಸ್ಸನ್ನು ಹೇಗೆ ತಾನೆ ಅರ್ಥಮಾಡಿಕೊಂಡಾಳು ಎನ್ನುವಂತಿದ್ದ ಅವಳ ಆರ್ಭಟದ ಮಾತು. ವಾಸು ಹತಾಶನಾಗಿ ಹನಿಗಣ್ಣಾಗಿ ತನ್ನೆದುರು ಕಡೆ ನೋಡಿದ. ಅವನ ಮನಸ್ಸು ಚಿಕ್ಕಮ್ಮ ಉಪ್ಪಿಟ್ಟು, ಬೈಗುಳಗಳನ್ನು ದಾಟಿ ಮುಂದೆ ಓಡತೊಡಗಿತು. ಓಹೋ ಇಂದು ಹೂವಣ್ಣಯ್ಯನಿಗೆ ಬೆಮ್ಮಾರಲ ಹಣ್ಣು ತರಬೇಕು. ಹೀಗೆ ಅವನ ಕರ್ತವ್ಯಗಳ ಪಟ್ಟಿ ಮುಂದುವರೆಯುತ್ತಾ ಹೋಗುತ್ತದೆ. ಈಗ ಉಪ್ಪಿಟ್ಟು ಕಾಫಿ ಎಲ್ಲಾ ಅವನಿಗೆ ನಗಣ್ಯ. 'ಇದ್ರಪ್ಪನ್ಮನೇ ಗಂಟು! ಹಡ್ಬೇ ಮುಂಡೆ'' ಎಂದು ನಾನಾ ವಿಧವಾಗಿ ಗೊಣಗಿ ಬಯ್ಯುತ್ತಾ ಪುಟ್ಟಕ್ಕನು ಏನಾಯಿತೆಂದು ಕೇಳಿದರೂ ಉತ್ತರ ಕೊಡುವ ಗೋಜಿಗೆ ಹೋಗದೆ, ತನ್ನ ಕರ್ತವ್ಯ ಪರತೆಗಾಗಿ ಓಡುತ್ತಾನೆ. ಅಡುಗೆ ಮನೆಯಿಂದ ಜಗಲಿಗೆ ಬಂದು ದೊಡ್ಡಿಗೆ ಕೈಹಾಕಿ ಕೈಗೆ ಬಂದ ಅಂಗಿಯನ್ನು ತೆಗೆದುಕೊಂಡು ಕಿರುಜಗಲಿಯ ಮೂಲೆಯಲ್ಲಿ ಕಂಬಳಿಯ ಒಳಗೆ ಮುದ್ದೆಯಾಗಿ ಬಿದ್ದಿದ್ದ ಪುಟ್ಟನನ್ನು ಕೂಗಿ ಕರೆದು, 'ನಿನ್ನೆ ಹೇಳಿದ್ದ ಕೆಲ್ಸಕ್ಕೆ ಬರ್ತೀಯೇನೋ' ಎಂದು ಕರೆಯುತ್ತಾನೆ. ಅವನು ನಿನ್ನೆ ಮುಳ್ಳು ಚುಚ್ಚಿದ್ದು ಬಾಳ ನೋವಾಗಿದೆ. ನಾ ಬರೋದಿಲ್ಲ ಎನ್ನುತ್ತಾನೆ. ಕಲ್ಲಿನ ಚೀಲವನ್ನು ಹುಡುಕಿ ರಬ್ಬರ್ ಬಿಲ್ಲನ್ನು ಎದೆಗೇರಿಸಿ ಹೊರಟನು. ವಾಸುವಿನ ಕಲ್ಲಿನ ಚೀಲವನ್ನು ಕುರಿತು ಕುವೆಂಪು ತಮಾಷೆಯಾಗಿಯೇ ಹೇಳುತ್ತಾರೆ. ಸ್ಲೇಟು ಪುಸ್ತಕಗಳನ್ನು ಹಾಕಿಕೊಂಡು ಸ್ಕೂಲಿಗೆ ಹೋಗಲು ಹೊಲಿಸಿದ್ದ ಚೀಲಕ್ಕೆ ರಬ್ಬರ್ ಬಿಲ್ಲಿಗಾಗಿ ಕಲ್ಲನ್ನು ಹೊರುವ ಚಾಕರಿ ಸಿಕ್ಕಿತ್ತು. 'ರಜಾ ಕಾಲದಲ್ಲಿ ಅದಕ್ಕೇಕೆ ನಿರುದ್ಯೋಗ'ವಾಗಬೇಕು? ಇನ್ನು ಅವನ ಜೇಬುಗಳು ಸರ್ವವಸ್ತು ಸಂಗ್ರಹಾಲಯಗಳಾಗಿದ್ದವು.

ವಾಸು ಮನೆಯಿಂದ ಹೊರಟು ಬೇಲರ ಬೈರನ ಮಗ ಗಂಗ ಹುಡುಗನನ್ನು ಬೇಟೆಗೆ ಕರೆದನು. ಇಬ್ಬರು ಕಾಡಿನಲ್ಲಿ ಅಲೆದಾಡಿ ಪಿಕಳಾರ ಹಕ್ಕಿಯ ಮರಿಗಳನ್ನು ಯಾರೋ ಕದ್ದು ಒಯ್ದು ವಿಚಾರಕ್ಕಾಗಿ ವಾಸು ದುಃಖಿಸುತ್ತಾನೆ. ದಿನವೂ ಆ ಮರಿಗಳಿಗೆ ಆಹಾರ ನೀಡಿದ ಆ ಮಮತೆ ಅವನನ್ನು ಕನಿಕರದ ಹಾದಿಗೆ ಕರೆದೊಯ್ಯುತ್ತದೆ. ನಂತರ ಹಿಂತಿರುಗಿ ಗಂಗನ ಬಿಡಾರಕ್ಕೆ ಬಂದಾಗ ವಾಸುವಿಗೆ ಆಘಾತ

ವಾಗುತ್ತದೆ. ಏಕೆಂದರೆ ತಾನು ಮುದ್ದಿನಿಂದ ಸಾಕಿದ ಮುದ್ದಾದ ಹಕ್ಕಿ ಮರಿಗಳನ್ನು ಮತ್ತು ಹಿಂದಿನ ದಿನ ಬಿಲ್ಲಿನಲ್ಲಿ ಹೊಡೆದಿದ್ದ ಹಕ್ಕಿಯನ್ನು ಗಂಗರ ಹುಡುಗ ಎತ್ತಿಕೊಂಡು ಬಂದಿದ್ದಾನೆ. ಅವನ ದುಃಖ ಕೋಪಕ್ಕೆ ತಿರುಗಿ ಮುಟ್ಟಬಾರವನಾದ ಗಂಗನನ್ನು ಹಿಡಿದು ಚೆನ್ನಾಗಿ ಗುದ್ದಿ ಶಪಿಸುತ್ತಾ ಮನೆಗೆ ತೆರಳುತ್ತಾನೆ.

ಹೂವಯ್ಯ ರಾಮಯ್ಯರೆಂದರೆ ವಾಸುವಿಗೆ ಬಲು ಪ್ರೀತಿ, ಮಮತೆ. ಆದರೆ ಮನೆ ಪಾಲಾಗುವ ಮಾತು ಬಂದಾಗ ಮುಗ್ಧ ಹುಡುಗ ವಾಸು ಕಣ್ಣೀರಿಡುತ್ತಾನೆ. ಹೂವಯ್ಯನನ್ನು ಬಿಟ್ಟು ಹೋಗಲು ಅವನ ಮನಸ್ಸು ಒಪ್ಪುವುದಿಲ್ಲ. ಮನೆಯಲ್ಲಿದ್ದ ಚರಸ್ವತ್ತನ್ನು ಹಿಸ್ಸೆ ಮಾಡುವಾಗ ಈ ಬಾಲಕನಿಗೆ ಮನೆ ಪಾಲಾಗುವುದು ಏನೋ ಒಂದು ಅಮಂಗಲದಂತೆ, ಅಶುಭದಂತೆ, ಅನಿಷ್ಟದಂತೆ ಅಪಶಕುನದ ಸೂಚನೆಯಂತೆ ತೋರತೊಡಗಿತು. ಕೊನೆಗೆ ಆತನು ಮೂರ್ಛಿತನಾಗಿ ಬೀಳುತ್ತಾನೆ. ವಾಸು ಅಗ್ರಹಾರದ ದೇವಸ್ಥಾನದಲ್ಲಿ ಲಕ್ಷ್ಮಿಯೊಡನೆ ನಡೆಸುವ ಸಂಭಾಷಣೆಯು ವ್ಯಂಗ್ಯ ಮತ್ತು ವಿಚಿತ್ರ ಹಾಸ್ಯಭರಿತವಾಗಿದೆ. ಹೆಂಗಸರ ಗುಂಪಿನಲ್ಲಿದ್ದ ಲಕ್ಷ್ಮಿ ತನಗೆ ಅಲ್ಲಿ ಕುಳಿತು ಬೇಸರವಾಗಿ ವಾಸುವಿನ ಬಳಿ ಮೆಲ್ಲನೆ ಬಂದು ಮಾತನಾಡಿಸುತ್ತಾಳೆ. ಆಗ ವಾಸು 'ಸುಮ್ಮನಿರೆ ಅಪ್ಪಯ್ಯ ಬಯ್ಯುತ್ತಾರೆ' ಎನ್ನುತ್ತಾನೆ. ಆಕೆ ಬಾಳೆ ಹಣ್ಣು ನಮಗೆ ಕೊಡ್ತಾರಾ? ದೇವರು ಗಂಡಸಾ ಇಲ್ಲವೇ ಹೆಂಗಸಾ? ಎನ್ನೋದೇ ಸೋಜಿಗವಾಗಿದೆ ಎಂದಾಗ ವಾಸು ಒಂದೇ ಮಾತಿನಲ್ಲಿ 'ದೇವರು ಎಲ್ಲಾದರು ಹೆಂಗಸಾಗ್ತಾರೇನೆ' ಎಂದು ನೇರವಾಗಿ ಹೇಳಿ ಬಿಡುತ್ತಾನೆ.

ವಾಸು ಒಬ್ಬ ನಿಸರ್ಗಾರಾಧಕ. ಅವನು ಹೂವಯ್ಯನಂತೆಯೇ ಕಾಡು, ಗಿಡ, ಮರ, ಪ್ರಾಣಿ ಪಕ್ಷಿಗಳೆಂದು ಅಪಾರವಾಗಿ ಪ್ರೀತಿಸುತ್ತಾನೆ. ಅಂತೆಯೇ ಶಿಕಾರಿ ಹೊರಡುವುದರಲ್ಲೂ ಆತನು ಒಂದು ಕೈ ಮುಂದು. ಮೊಂಡು ಧೈರ್ಯದ ಸಾಹಸೀ ವ್ಯಕ್ತಿತ್ವ ಹೊಂದಿದವನು. ತನ್ನ ಅಣ್ಣನಾದ ಹೂವಯ್ಯನನ್ನೇ ಆದರ್ಶವೆಂದು ಅವನನ್ನು ಅನುಕರಿಸುತ್ತಾನೆ. ಕೊನೆಗೆ ಶ್ಯಾಮಯ್ಯಗೌಡರ ಎರಡನೆ ಮಗಳು ಸೀತೆಯ ತಂಗಿ ಲಕ್ಷ್ಮಿಯನ್ನು ಮದುವೆಯಾಗಿ ವಾಸಪ್ಪಗೌಡನೆನಿಸುತ್ತಾನೆ.

## ಲಕ್ಷ್ಮಿ :

ಲಕ್ಷ್ಮಿ ಮುತ್ತಳ್ಳಿ ಶ್ಯಾಮಯ್ಯಗೌಡರ ಎರಡನೇ ಮಗಳು. ಸೀತೆ ಮತ್ತು ಚಿನ್ನಯ್ಯರ ಮುದ್ದಿನ ತಂಗಿ. ಕಾನೂರ ಮನೆಯ ಹಿರಿಯ ಮಗ ಹೂವಯ್ಯನ ಕೈ ಹಿಡಿದು ಕಥಾನಾಯಕಿ ಸೀತೆ ನಿಜವಾದ ಅರ್ಥದ ಹೆಗ್ಗಡಿತಿಯಾಗಬೇಕಾಗಿದ್ದವಳು. ಆದರೆ ವಿಧಿಯ ಆಟದಿಂದ ಅವಳ ತಂಗಿಯಾದ ಲಕ್ಷ್ಮಿ ಕಾನೂರು ಚಂದ್ರಯ್ಯಗೌಡರ ಕೊನೆಯ ಮಗ ವಾಸುವನ್ನು ಮದುವೆಯಾಗಿ ನಿಜವಾದ ಅರ್ಥಕ್ಕೆ ಕಾನೂರು ಹೆಗ್ಗಡಿತಿಯಾಗುತ್ತಾಳೆ.

ಸೀತೆ ಮನೆಯ ಪಕ್ಕದಲ್ಲಿದ್ದ ತೋಟದಲ್ಲಿ ಗುಲಾಬಿ ಹೂಗಳನ್ನು ಕೊಯ್ಯುತ್ತಿದ್ದಾಗ ಅವಳ ಪುಟ್ಟ ತಂಗಿ ಲಕ್ಷ್ಮಿ ಅವಳ ಸೀರೆಯ ನೆರಿಗೆಗಳನ್ನು ಭದ್ರವಾಗಿ ಹಿಡಿದು ನಿಂತಿರುತ್ತಾಳೆ. ಚಿನ್ನಯ್ಯ ಆ ನಡೆಯಲು ಬಾರದ ಮಗುವನ್ನು ಕರೆದುಕೊಂಡು ಹೋಗಲು ಲಕ್ಷ್ಮಿಯ ಬಳಿ ಬಂದನು. ಲಕ್ಷ್ಮಿಯು ಅಣ್ಣ ಬಂದುದನ್ನು ಕಂಡು ತಾನು ಮನೆಯಿಂದ ಅಷ್ಟು ದೂರ ಹೋಗಿದ್ದ ಸಾಹಸಕ್ಕಾಗಿಯೋ ಎಂಬಂತೆ ನಗುತ್ತಾ ಅವನಲ್ಲಿಗೆ ಓಡಿ ಬರುವ ಸಂಭ್ರಮದಲ್ಲಿ ಲಂಗಕ್ಕೆ ಕಾಲು ಸಿಕ್ಕಿಕೊಂಡು ಹಸಿರು ಹುಲ್ಲಿನ ಮೇಲೆ ಬಿದ್ದು ಅಳತೊಡಗಿದಳು. ಚಿನ್ನಯ್ಯ ಓಡಿಹೋಗಿ ಅವಳನ್ನು ಎತ್ತಿಕೊಂಡು ಸಮಾಧಾನಪಡಿಸುತ್ತಾನೆ.

ಹೂವಯ್ಯ ಮುತ್ತಳ್ಳಿಗೆ ಮೊದಲ ಬಾರಿಗೆ ಬರುವಾಗ ಆ ಸಂಭ್ರಮದಲ್ಲಿ ಸೀತೆ ತನ್ನ ಕೋಣೆಯನ್ನು ಸೇರಿ ಅಲಂಕಾರಗೈಯ್ಯುತ್ತಿರುತ್ತಾಳೆ. ಅಲ್ಲಿಗೆ ಬಂದ ತುಂಟ ಮಗು ಲಕ್ಷ್ಮಿ ಅಕ್ಕಯ್ಯ ಎಂದು ಬಾಗಿಲನ್ನು ಗುದ್ದುತ್ತಲೂ ಬೆಕ್ಕು ಪರಿಚಿದಂತೆ ಬಾಗಿಲನ್ನು ತೆರೆಯುವಂತೆ ಅವಸರಿಸುತ್ತಾಳೆ. ಅಕ್ಕ ಬಾಗಿಲು ತೆರೆಯದಿದ್ದುದನ್ನು ಕಂಡ ಲಕ್ಷ್ಮಿ ಸತ್ಯಾಗ್ರಹ ಆರಂಭಿಸಿ ಅವ್ವನನ್ನು ಕೂಗುತ್ತಾ ಬಿದ್ದು ಹೊರಳಾಡುತ್ತಾಳೆ. ಆಕೆಯ ಉದ್ದೇಶ ಅಕ್ಕ ಇದ್ದಲ್ಲಿಗೆ ತಾನು ಹೋಗಬೇಕು. ಅಕ್ಕ ಏನೇನು ಮಾಡುತ್ತಿರುತ್ತಾಳೊ ತಾನು ಕೂಡ ಅದನ್ನು ನೋಡಬೇಕು ಹಾಗೂ ಅದರಂತೆಯೇ ಮಾಡಬೇಕು ಎಂಬುದು. ತಾಯಿ ಗೌರಮ್ಮನವರು ಬಾಗಿಲು ತೆರೆಸಿ ಬೈದು ಹೋದಮೇಲೆ ಸೀತೆ ಚಾಪೆಯ ಮೇಲೆ ಕೂತಿದ್ದ ಗೊಂಬೆಯಂತಿದ್ದ ಲಕ್ಷ್ಮಿಯನ್ನು ಗದರಿಸಿದಾಗ, ಆಕೆ ಮತ್ತೆ ಅಳಲು ಶುರು ಮಾಡುತ್ತಾಳೆ. ಸೀತೆಗೆ ಹೆದರಿಕೆಯಾಗಿ ಹೇಗೊ ಮಾಡಿ ಅವಳನ್ನು ಸಂತೈಸಿ ಅವಳಿಗೂ ಅಲ್ಪ ಸ್ವಲ್ಪ ಅಲಂಕಾರ ಮಾಡುತ್ತಾಳೆ. ಈ ಮಧ್ಯೆ ಲಕ್ಷ್ಮಿ ತನ್ನ ಕಾರ್ಯದಲ್ಲಿ ತನ್ಮಯಳಾಗಿದ್ದಳು. ಬಾಚಣಿಗೆ ಹೂ ಆಭರಣಗಳನ್ನೆಲ್ಲ ಒಂದೊಂದಾಗಿ ಪರೀಕ್ಷೆ ಮಾಡುತ್ತಿದ್ದಳು. ಎಣ್ಣೆಯ ಕುಡಿಕೆಗೂ ಕೈ ಹಾಕಿದಳು. ಅದು ಅವಳ ಗ್ರಹಚಾರಕ್ಕೆ ಉರುಳಿಬಿದ್ದು ಚಾಪೆಯ ಮೇಲೆ ತೈಲವಾಹಿನಿ ಪ್ರವಹಿಸುತ್ತದೆ. ಅವಳ ಲಂಗದ ಭಾಗವು ತೊಯ್ದು ಹೋಯಿತು. ಸೀತೆ ಅವಳ ಕೆನ್ನೆಯನ್ನು ಚಿವುಟಿ ಎಲ್ಲವನ್ನು ಶುಚಿಗೊಳಿಸಬೇಕಾಯಿತು.

ಅಮಾವಾಸ್ಯೆ ಕಗ್ಗತ್ತಲೆಯಂದು ಹೂವಯ್ಯ ಬೆನ್ನುನೋವಿನಿಂದ ಮುತ್ತಳ್ಳಿಯ ಕೋಣೆಯಲ್ಲಿ ಮಲಗಿದ್ದಾಗ ಹೊರಗಡೆ ಜಗಲಿಯ ಮೇಲೆ ಶ್ಯಾಮಯ್ಯಗೌಡ್ರು, ಸಿಂಗಪ್ಪಗೌಡ್ರು, ರಾಮಯ್ಯರು ಮಾತನಾಡುತ್ತಾ ಕುಳಿತಿದ್ದರು. ಆಗ ಲಕ್ಷ್ಮಿ ಓಡಿ ಬಂದು ತಂದೆಯ ಬಳಿ ಹೋಗುತ್ತಿದ್ದಳು. ಮಧ್ಯ ಸಿಂಗಪ್ಪಗೌಡರು ಅವಳನ್ನು ಹಿಡಿದುಕೊಂಡು ತೊಡೆಯ ಮೇಲೆ ಕುಳ್ಳಿರಿಸಿಕೊಂಡರು. ಅವಳು ಮೊದಲು ಸಂಕೋಚ ಮನೋಭಾವವನ್ನು ಪ್ರದರ್ಶಿದರೂ ತುಸು ಹೊತ್ತಿನಲ್ಲಿಯೇ ಸೀತೆಮನೆ ಸಿಂಗಪ್ಪ ಮಾವನೊಂದಿಗೆ ಸಲುಗೆಯಿಂದ ಮಾತನಾಡತೊಡಗಿದಳು. ಅವಳ ಮೃದು ಮಾತುಗಳೋ ವಿಧವಿಧವಾಗಿ ವಿಚಿತ್ರವಾಗಿತ್ತು. ಸಿಂಗಪ್ಪಗೌಡರು ಲಕ್ಷ್ಮಿಯನ್ನು ಮುದ್ದಿಸುತ್ತಾ ನೀನು ನಿಮ್ಮವ್ವನ ಮಗಳೋ ನಿನ್ನಪ್ಪಯ್ಯನ

ಮಗಳೋ ಎಂದು ಕೇಳಿದಾಗ, ಅವಳು ನಾನು ಅವ್ವನ ಮಗಳು ಎಂದಳು. ಯಾರು ಹೇಳಿದರು ನಿನಗೆ ನನ್ನ ಕಣ್ಣೆದುರು ಒಂದು ಮಣ ಅಡಿಕೆ ಕೊಟ್ಟು ನಿನ್ನ ಕೊಂಡುಕೊಂಡಿದ್ದಾರೆ ಕಂದಾರೆಯವರ ಕೈಯಿಂದ. ನೀನು ಅವ್ವನ ಮಗಳಲ್ಲ ಅಪ್ಪಯ್ಯನ ಮಗಳು ಎಂದು ರೇಗಿಸುತ್ತಾರೆ. ಲಕ್ಷ್ಮಿ ಹೂಂ ಇಲ್ಲ ನಾನು ಅವ್ವಯ್ಯನ ಮಗಳು ಎಂದಳು. ಹೋಗಲಿ ಬಿಡು ನಿನ್ನಪ್ಪಯ್ಯ ನಿನ್ನವ್ವಯ್ಯನಿಗೆ ಏನಾಗಬೇಕು ಎಂದು ಸಿಂಗಪ್ಪಗೌಡರು ಪ್ರಶ್ನೆ ಕೇಳಿದಾಗ ಸಾಂಸಾರಿಕ ಜೀವನದ ಸಂಬಂಧಗಳ ಜಾಡನ್ನು ಅರಿಯದ ಆ ಮುಗ್ಧ ಹುಡುಗಿ 'ಅಪ್ಪಯ್ಯ ಆಗಬೇಕು'[3] ಎಂದು ನೇರವಾಗಿ ಉತ್ತರಿಸುತ್ತಾಳೆ.

ಆರೋಗ್ಯ ಸರಿ ಇಲ್ಲದಿದ್ದ ಸೀತೆಯ ಶೋಚನೀಯ ಸ್ಥಿತಿಯನ್ನು ಕಂಡ ತಾಯಿ ಗೌರಮ್ಮನವರ ಮನದಲ್ಲಿ ಮರುಕವು ಭಯವೂ ಮೂಡಿದ್ದವು. ಮುತ್ತಳ್ಳಿಯಲ್ಲಿ ಒಂದು ಮಧ್ಯಾಹ್ನ ಅದೇ ಯೋಚನೆಯಲ್ಲಿದ್ದ ಗೌರಮ್ಮನವರು ತನ್ನ ಎರಡನೇ ಮಗಳು ಲಕ್ಷ್ಮಿಯನ್ನು ಕೂಗಿ ಕರೆಯುತ್ತಾರೆ. ಲಕ್ಷ್ಮಿ ರಾಗ ಪಾಡಿದರು ತಾಯಿಯ ಬಳಿಗೆ ಬರುವುದೇ ಇಲ್ಲ. ತೆಂಗಿನೆಣ್ಣೆ ಕುಡಿಕೆ, ಮರದ ಬಾಚಣಿಕೆಯನ್ನು ಮುಂದಿಟ್ಟುಕೊಂಡು ತಾಯಿ ರೇಗುತ್ತ, ಬರ್‍ತೀಯೇ ಇಲ್ಲೇ ಬಜಾರಿ ಎಂದು ಕಿಟಕಿಯ ಬಳಿ ಹೋಗಿ ಹೊರಗೆ ನೋಡಿದರು. ಲಕ್ಷ್ಮಿ ಉರಿಬಿಸಿಲಿನಲ್ಲಿ ಮಣ್ಣಿನ ರೊಟ್ಟಿಗಳನ್ನು ಮಾಡಿ ಒಣಗಲು ಹರಡಿದ್ದಳು. ಅವಳ ಬಳಿ ಮಾಡಿನ ನೆಳಲು ಕರ್‍ರಗೆ ಬಿದ್ದಿದ್ದ ತಾಣದಲ್ಲಿ ಅವಳೇ ರಚಿಸಿದ್ದ ಮಣ್ಣಿನ ಸಣ್ಣ ಒಲೆಯೂ ಒಲೆಯ ಮೇಲೆ ಅಂತಹುದೇ ಕುಶಲ ಕಲೆಯ ಜಾತಿಗೆ ಸೇರಿದ್ದ ಒಂದು ಸೊಟ್ಟ ಮೂತಿಯ ಆಟದ ಮಡಕೆಯು, ಬಹಿರಂಗಕ್ಕೆ ಬಂದ ಸ್ವಯಂಕೃತಾಪರಾಧಗಳಂತೆ ನಾಚಿದ್ದು, ಬಾಲೆಯ ಮುಖವೆಲ್ಲ ಬೆವರಿ ಕೆಂಪಾಗಿತ್ತು. ಕೈಯ್ಯಲ್ಲಿ ಕೆಮ್ಮಣ್ಣು ಕೆಸರಾಗಿದ್ದು, ಉಟ್ಟಿದ್ದ ಪರಿಕಾರದ ಮೇಲೆ ಕಲಸಿದ ಮಣ್ಣಿನ ಮುದ್ರಾಪ್ರಭಾವ ಚೆನ್ನಾಗಿ ತೋರುತ್ತಿತ್ತು. ಲಕ್ಷ್ಮಿಯ ನೆರಳು ಅವಳ ಕಾಲಡಿಯಲ್ಲಿ ಕರ್‍ರಗೆ ಮಸಿ ಚೆಲ್ಲಿದಂತೆ ಮುದ್ದೆಯಾಗಿತ್ತು.

'ಅಯ್ಯೋ ಇವಳಿಗೇನು ಮಾಡಬೇಕಾಯ್ತು? ಮಣ್ಣಾಡ್ತಿಯೇನೆ ಬಿಸಿಲಿನಲ್ಲಿ. ಆಗೆ ಹೋಯ್ತು ಪರಿಕಾರದ ಗತಿ. ಇವತ್ತು ಒಗೆದಾಕಿದ್ದಲ್ಲೇ!! ಅಯ್ಯೋ. ನಿನ್ನ ಸೊಡ್ಡೆತ್ತಿ ಹೋಗಾ. ಇಲ್ಲಿ ಬಾರೆ. ತಾಯಿಯ ಕೂಗಾಟವನ್ನು ಕೇಳಿ ಬೆವರಿದ್ದ ಬಾಲೆ ಕೆಂಪು ಮುಖವನ್ನು ಮೇಲೆತ್ತಿ ನೋಡಿ ನಗುತ್ತಾ ನೀಳವಾದ ರಾಗ ಧ್ವನಿಯಲ್ಲಿ 'ರೊಟ್ಟಿ ಮಾಡ್ತಿನ್ ಕಣೆ' ಎಂದಳು.

'ಹ್ಞೂ ನಿನ್ನ ಮಿಂಡ ಬರ್‍ತಾನೆ ಅಂತಾ ರೊಟ್ಟಿ ಮಾಡ್ತಿದ್ದಿಯೇನೇ? ಬತ್ತಿಯೇ ಇಲ್ಲೇ ಒಳಗೆ? ನಿನಗೆ ಮೈಮೇಲೆ ಕೈಯಾಡಿಸದೇ ಬಹಳ ದಿನವಾಯ್ತು. ಸೊಕ್ಕಿ ಸೊಲಗೆ ನೀರು ಕುಡೀತೀಯಾ!'[4] ಲಕ್ಷ್ಮಿ ಮನಸ್ಸಿಲ್ಲದ ಮನಸ್ಸಿನಿಂದ ಆಟವನ್ನು ಬಿಟ್ಟು ಒಳಗೆ ಹೋಗಿ ಅಂಡೆಯಲ್ಲಿದ್ದ ಸ್ವಚ್ಛವಾದ ನೀರಿಗೆ ಮಣ್ಣುಮಯವಾಗಿದ್ದ ಎರಡು ಕೈಗಳನ್ನು ಅದ್ದಿ ತೊಳೆದುಕೊಂಡು ಅಕ್ಕ ಮಲಗಿದ್ದ ಕೊಠಡಿಗೆ ಹೋದಳು.

ತಾಯಿ ಎಣ್ಣೆ ಕುಡಿಕೆ ಬಾಚಣಿಗೆಗಳನ್ನು ಮುಂದಿಟ್ಟಕೊಂಡು ಕುಳಿತಿದ್ದುದು ಕಣ್ಣಿಗೆ ಬಿದ್ದೊಡನೆ ಲಕ್ಷ್ಮಿ ಮುಖವನ್ನು ಮುಸುಡನ್ನಾಗಿ ಮಾಡಿಕೊಂಡು ದೂರದಲ್ಲಿಯೇ ಗೋಡೆಗೊರಗಿ ನಿಂತುಬಿಟ್ಟಳು.

ತಲೆ ಬಾಚಿಕೊಳ್ಳುವುದೆಂದರೆ ಅವಳಿಗೊಂದು ಮಹಾಕ್ಲೇಶವಾಗಿತ್ತು. ಅದರಲ್ಲಿಯೂ ಪ್ರಶಸ್ತವಾದ ಮಣ್ಣಾಟವನ್ನು ತ್ಯಜಿಸಿ ತಲೆ ಬಾಚಿಕೊಳ್ಳುವಂತಹ ಕೆಲಸಕ್ಕೆ ಬಾರದ ಕೆಲಸದಲ್ಲಿ ಕಾಲಹರಣ ಮಾಡ ಬೇಕಲ್ಲ ಎಂದು ಎದೆ ಕುದಿಯತೊಡಗಿತು. 'ಇಲ್ಲಿ ಬಾರೆ' ತಾಯಿ ಕರೆದಳು. ಮಗಳು ನಿಂತ ಜಾಗದಿಂದ ಒಂದಿನಿತೂ ಅಲುಗಾಡಲಿಲ್ಲ. ಅವಳ ಕಣ್ಣುಗಳಲ್ಲಿ ಆಗಲೇ ನೀರಾಡತೊಡಗಿತ್ತು. ಬಾರೆ, ತಲೆ ಬಾಚ್ತೀನಿ. 'ಬ್ಯಾಡಾ ನಾನೊಲ್ಲೆ' ಎಂದು ಅಳುಮೊಗವಾದಳು ಲಕ್ಷ್ಮಿ. 'ನೆಂಟರು ಬರ್ತಾರೆ ಕಣೇ ತಲೆ ಬಾಚ್ಕೊಂಡು ಹೂ ಮುಡ್ಕೊಂಡು' ಎಂದು ತಾಯಿ ಸುಳ್ಳಿನ ಸಮ್ಮೋಹನ ಬೀಸುತ್ತಿರುವುದನ್ನು ತಿಳಿದ ಮಗಳು 'ಬ್ಯಾಡಾ ನಾನೊಲ್ಲೆ ನಂಗೆಲ್ಲಾ ಗೊತ್ತಿದೆ ಬರೀ ಸುಳ್ಳು' ಎಂದು ಅಳುವಿನ ಮೇಲೆ ನಗುವೇರಿದ ಮೊಗವನ್ನು ಕೊಂಕಿಸಿ ಸೊಟ್ಟಗೆ ಮಾಡಿದಳು. ನೀಬತ್ತಿಯೋ ಬೆನ್ನಮೇಲೆ ಬೀಳಬೇಕೋ? ಹೂ.. ಹೂ.. ಹೂ.. ಹೂ ಎಂದು ಲಕ್ಷ್ಮಿ ಅತ್ತಳೇ ಹೊರತು ನಿಂತಲ್ಲಿಂದ ಕದಲಲಿಲ್ಲ. ಗೌರಮ್ಮನವರಿಗೆ ಸಿಟ್ಟು ಬಂದು ದಡಕ್ಕನೆ ಎದ್ದು ಹೋಗಿ ಬೆನ್ನ ಮೇಲೆ ದಿಡ್ಡನೆ ಒಂದು ಗುದ್ದು ಗುದ್ದಿ ದರದರನೆ ಎಳೆದು ತಂದು ಕುಳ್ಳಿರಿಸಿದಳು. ಲಕ್ಷ್ಮಿ ಗಟ್ಟಿಯಾಗಿ ರೋದಿಸುತ್ತಾ ಕಣ್ಣೀರು ಸುರಿಸುತ್ತಾ ಶರಣಾಗತಳಾದಳು.

ಕೊನೆಗೆ ಲಕ್ಷ್ಮಿ ಕಾನೂರು ಚಂದ್ರಯ್ಯಗೌಡರ ಎರಡನೆ ಮಗ ಪುಟ್ಟಮ್ಮನ ತಮ್ಮ ವಾಸುವನ್ನು ಮದುವೆಯಾಗಿ ಕಾನೂರಿನ ಹೆಗ್ಗಡಿತಿಯಾಗಿ ನೆಲೆಸುತ್ತಾಳೆ. ಬಾಲಕಿಯರಲ್ಲಿ ಕಾಣುವ ಸಹಜ ತುಂಟ ತನದಿಂದ ಲಕ್ಷ್ಮಿ ಪಾತ್ರ ಬಿಂಬಿತವಾಗಿದೆ.

**ಸೀತೆ :**

ಸೀತೆ ಮುತ್ತಳ್ಳಿ ಶ್ಯಾಮಯ್ಯಗೌಡರ ಮುದ್ದಿನ ಮಗಳು. ಕುವೆಂಪು ಈಕೆಯನ್ನು ಕಥಾ ನಾಯಕಿ ಯೆಂದು ಬಿಂಬಿಸುತ್ತಾರೆ. ಆದರೂ ಏನೋ ಹಾಗಬೇಕಾದುದು ಮತ್ತೇನೋ ಆಗಿ ಹೆಗ್ಗಡಿತಿಯ ಸ್ಥಾನಕ್ಕೆ ಏರಬೇಕಾಗಿದ್ದ ಸೀತೆ ಆ ಸ್ಥಾನವನ್ನು ತಂಗಿಯಾದ ಲಕ್ಷ್ಮಿಗೆ ಬಿಟ್ಟುಕೊಟ್ಟು ತಾನು ವಿವಾಹಿತಳಾದರೂ ಸನ್ಯಾಸಿಯಾಗುತ್ತಾಳೆ.

ಹೂವಯ್ಯ ರಾಮಯ್ಯರು ಮುತ್ತಳ್ಳಿಗೆ ಬರುವ ಸುದ್ದಿ ತಿಳಿದು ಅವಳು ಪಡುವ ಸಂಭ್ರಮ ಹೇಳ ತೀರದು. ಗುಲಾಬಿ ಹೂಗಳನ್ನು ಕೊಯ್ಯುವ ಸನ್ನಿವೇಶದಿಂದ ಕುವೆಂಪು ಸೀತೆಯ ಪಾತ್ರವನ್ನು ಪರಿ ಚಯಿಸುತ್ತಾರೆ. ಅಣ್ಣನಾದ ಚಿನ್ನಯ್ಯ ತನ್ನ ಮನೆಗೆ ಯಾರೋ ಬರುತ್ತಾರೆ ಎಂದು ಅವಳನ್ನು ರೇಗಿಸಿದರೆ ತಾನು ಮದುವೆಯಾಗಬೇಕೆಂದಿದ್ದ ಹೂವಯ್ಯನ ಹೆಸರನ್ನು ಹೇಳಲು ಅವಳು ನಾಚುತ್ತಾಳೆ.

ಸೀತೆಗೆ ಹೂವಯ್ಯನು ಚಿಕ್ಕಂದಿನಿಂದಲೂ ಚಿರಪರಿಚಿತ ಸ್ನೇಹಮೂರ್ತಿ. ಗೌರಮ್ಮನವರು ಕಡೆಯ ಪಕ್ಷ ವರ್ಷಕ್ಕೆ ಒಂದು ಸಾರಿಯಾದರು ಕಾನೂರಿಗೆ ನೆಂಟರಾಗಿ ಒಂದೆರಡು ವಾರಗಳಿಗಿಂತಲೂ ಹೆಚ್ಚಾಗಿ ಅಲ್ಲಿದ್ದು ಬರುತ್ತಿದ್ದದು ವಾಡಿಕೆಯಾಗಿತ್ತು. ಹೂವಯ್ಯನು ಸೀತೆಗಿಂತಲೂ ಐದಾರು ವರ್ಷ ಹೆಚ್ಚು ವಯಸ್ಸಿನವನಾಗಿದ್ದರೂ ಸೀತೆಗೆ ತನ್ನ ಓರಗೆಯವರಿಗಿಂತಲೂ ಅವನಲ್ಲಿಯೇ ಹೆಚ್ಚು ಪ್ರೀತಿ, ಮೈತ್ರಿ, ಸಲುಗೆ. ತಾನು ಊಟಕ್ಕೆ ಕೂರುವುದು ಹೂವಯ್ಯನ ಪಕ್ಕದಲ್ಲಿ. ಆಟವಾಡುವುದು ಹೂವಯ್ಯನ ಜೊತೆಯಲ್ಲಿ. ಓದುವಾಗ ಹೂವಯ್ಯನೇ ಪಾಠ ಹೇಳಿಕೊಡಬೇಕು. ಹೂವಯ್ಯ ಭಾವನೆಂದರೆ ಸೀತೆಗೆ ಪಂಚಪ್ರಾಣ. ಒಂದು ಸಾರಿ ಮಕ್ಕಳೆಲ್ಲ ಸೇರಿ ಸಂಸಾರದ ಆಟ ಆಡುತ್ತಿದ್ದಾಗ ಹೂವಯ್ಯನಿಗೆ ಸೀತೆಯನ್ನು ಕೊಟ್ಟು ವಿವಾಹವಾಗಬೇಕೆಂದು ನಿಶ್ಚಯವಾಯಿತು. ಧಾರೆಯೆರೆಯುವ ಅನುಕರಣವೂ ನಡೆದುಹೋಗಿ ಹೂವಯ್ಯ ಸೀತೆಗೆ ತಾಳಿ ಕಟ್ಟಿದ್ದನು. ದಂಪತಿಗಳಿಗೆ ಒಂದು ಬಟ್ಟೆ ಗೊಂಬೆಯ ಕೂಸು ಹುಟ್ಟಿತು. ಅಲ್ಲಿಂದ ಗಂಡಹೆಂಡಿರು ತೀರ್ಥಹಳ್ಳಿಯ ಎಳ್ಳಾಮಾಸೆಗೆ ಹೋದುದನ್ನು ಅಭಿನಯಿಸಿದರು. ಮೇಳಿಗೆ ಕೇರಿಗೆ ಹೋಗಿ ಮಿಠಾಯಿ, ಮಂಡಕ್ಕಿ, ಕಡ್ಲೆ, ಕರ್ಜೂರ, ಬತ್ತಾಸು, ಪೀಪಿ ಮೊದಲಾದ ಪದಾರ್ಥಗಳನ್ನು ವಿಕ್ರಯ ಮಾಡಿದ್ದನ್ನು ನಟಿಸಿದರು. ಒಂದು ಸಾರಿ ಗಂಡ-ಹೆಂಡಿರ ಕಲಹವನ್ನು ಅಭಿನಯಿಸಿ, ಹೂವಯ್ಯನು ಸೀತೆಯನ್ನು ಹೊಡೆಯುವಂತೆ ಮಾಡಿದನು. ಆಗ ಆಟದ ಭೂಮಿಕೆಯಲ್ಲಿ ಸೀತೆಯ ಅಣ್ಣನಾಗಿದ್ದ ರಾಮಯ್ಯನು ಅವಳನ್ನು ಬಿಡಿಸಿದನು. ಆ ದಿನವೆಲ್ಲ ಸೀತೆ ಹೂವಯ್ಯರು ನಿಜವಾಗಿಯೂ ಮದುವೆಯಾದವರಿಗಿಂತಲೂ ಹೆಚ್ಚಾಗಿ ಮೆರೆದು ನಲಿದರು. ಒಬ್ಬರನ್ನೊಬ್ಬರು ಅಗಲಲೇ ಇಲ್ಲ. ರಾತ್ರಿ ಮಲಗುವಾಗಲೂ ಕೂಡ ಸೀತೆ ಹೂವಯ್ಯನೊಡನೆ ಮಲಗುವೆನೆಂದು ಹಠ ಮಾಡಿದ್ದಳು. ಆಗ ಗೌರಮ್ಮನವರು ಎರಡು ಗುದ್ದಿ ಒಳಗೆ ಎಳೆದುಕೊಂಡು ಹೋಗಿದ್ದರು.

ಆ ವಿನೋದ ವಿವಾಹದ ಸುದ್ದಿ ಎಲ್ಲರ ಕಿವಿಗೂ ಬಿದ್ದು ವಿನೋದಕ್ಕಾಗಿ ಎಲ್ಲರೂ ಅವರಿಬ್ಬರನ್ನು ದಂಪತಿಗಳೆಂದೇ ಕರೆಯತೊಡಗಿದ್ದರು. ಇನ್ನೊಂದು ಸಾರಿ ಭಾಗವತರಾಟದಲ್ಲಿ ನೋಡಿದ್ದ ಸ್ವಯಂವರಾನುಕರಣೆಯ ಲೀಲೆಯಲ್ಲಿ ಸೀತೆ ಹೂವಯ್ಯನಿಗೆ ತಾನೆ ತಯಾರು ಮಾಡಿದ ಮಾಲೆಯನ್ನು ಹಾಕಿ ಅವನನ್ನು ಪತಿಯಾಗಿ ವರಿಸಿದ್ದಳು. ಮತ್ತೊಂದು ಸಾರಿ, ಆಗ ಸೀತೆಗೆ ಆರೇಳು ವಯಸ್ಸಿರಬಹುದು. ಹೂವಯ್ಯನಿಗೆ ಹನ್ನೊಂದು ಹನ್ನೆರಡಿರಬಹುಧು. ಕಾನೂರಿಗೆ ಔತಣಕ್ಕೆ ಬಂದಿದ್ದ ಸೀತೆಮನೆ ಸಿಂಗಪ್ಪಗೌಡರು ಜೈಮಿನಿ ಭಾರತವನ್ನು ಓದಿ ಅರ್ಥ ಹೇಳುತ್ತಿದ್ದಾಗ ಹುಡುಗರೆಲ್ಲ ಅವರನ್ನು ಮುತ್ತಿದ್ದರು. ಸೀತೆ ಹೂವಯ್ಯನ ಹೆಗಲ ಮೇಲೆ ಕೈಯಿಟ್ಟು ಅವನನ್ನು ಅಪ್ಪಿಕೊಂಡಂತೆ ಕುಳಿತಿದ್ದಳು. ಕಥೆಯಲ್ಲಿ ದಂಪತಿಗಳ ಅನುರಾಗ ಪ್ರಸಂಗ ಬಂದಾಗ ಸಿಂಗಪ್ಪಗೌಡ ಕುಳಿತವರಿಗೆಲ್ಲಾ ಸೀತೆ ಹೂವಯ್ಯರನ್ನು ತೋರಿಸಿ ಏನೇನೋ ಹಾಸ್ಯದ ಮಾತುಗಳನ್ನು ಹೇಳಲು, ಬಾಲಕ ಬಾಲಕಿಯರಿಬ್ಬರು ಅವಮಾನವಾದದ್ದರಿಂದ ಅಳುತ್ತಾ ಒಬ್ಬರನ್ನೊಬ್ಬರು ಅಗಲಿ ದೂರ ದೂರ ಸರಿದು ಕುಳಿತಿದ್ದರು. ಗುಲಾಬಿ ಪೊದೆಯ ಬಳಿ ನಿಂತಿದ್ದ

ಸೀತೆಯ ಮನಸ್ಸಿನಲ್ಲಿ ಇಂತಹ ನೂರಾರು ಚಿತ್ರಗಳು ಸುಳಿದು, ಅವಳಿಗೆ ಹರ್ಷವಾಯಿತು. ಅವುಗಳಲ್ಲಿ ಕೆಲವು ಸನ್ನಿವೇಶಗಳನ್ನು ನೆನೆದು ತನ್ನೊಳಗೆ ತಾನೆ ನಾಚಿಕೊಂಡು ಮುಗುಳುನಗೆ ನಕ್ಕಳು. ಅವಳು ಅಲ್ಲಿದ್ದುದನ್ನು ಅರಿಯದೇ ಹಾರಿ ಬಂದು ಸಮೀಪದ ಒಂದು ಕೊಂಬೆಯಲ್ಲಿ ಕುಳಿತು ಉಲ್ಲಾಸದಿಂದ ಗಾನ ಲೋಲವಾಗಿದ್ದ ಒಂದು ಪಿಕಳಾರ ಹಕ್ಕಿ, ಅದರ ಧ್ವನಿ ಅವಳ ಕಣ್ಣಿಗಾಗಲಿ, ಕಿವಿಗಾಗಲಿ ಬೀಳಲೇ ಇಲ್ಲ. ಬಾಲ್ಯವೂ ಕಳೆದು ತಾರುಣ್ಯವು ಪ್ರಾಪ್ತವಾದ ಮೇಲೆ ಸೀತೆ ಹೂವಯ್ಯನ ಸಂಬಂಧವು ಲೋಕದ ದೃಷ್ಟಿಗೆ ದೂರ ದೂರವಾದಂತೆ ತೋರುತ್ತಿತ್ತು. ಆದರೆ ಅಂತರಂಗದಲ್ಲಿ ಅವರು ಹೆಚ್ಚು ಹೆಚ್ಚು ಸಮೀಪವಾಗಿದ್ದರು. ಅವರ ಸಂಬಂಧ ಯುವಕ ಯುವತಿಯರ ಬೇಟವಾಗಿರಲಿಲ್ಲ. ಬಾಲಕ – ಬಾಲಕಿಯರಲ್ಲಿ ಇರುವ ಮುಗ್ಧವಾದ ಬಾಲ್ಯ ಪ್ರಣಯ ಮಾತ್ರವಾಗಿತ್ತು. ಈಗವರು ಒಬ್ಬರನ್ನೊಬ್ಬರು ಅಗಲಿರುವುದರಿಂದ ವಿರಹ ಯಾತನೆಯು ಇರಲಿಲ್ಲ. ಒಬರನ್ನೊಬ್ಬರು ಅನವರತವೂ ನೆನೆಯುತ್ತಲೂ ಇರಲಿಲ್ಲ. ನಿನ್ನೆ ಸೀತೆಗೆ ಹೂವಯ್ಯನ ಆಲೋಚನೆಯೇ ಇರಲಿಲ್ಲ. ಇವತ್ತು ಚಿನ್ನಯ್ಯನಿಂದ ಸುದ್ದಿ ಕೇಳಿದ ಮೇಲೆ ಆಕೆಯಲ್ಲಿ ಪೂರ್ವಸ್ಮೃತಿ ಜಾಗೃತವಾಗಿ ಇಷ್ಟು ದಿನವೂ ಸುಪ್ತವಾಗಿದ್ದ ಪ್ರೇಮವೂ ಮತ್ತೆ ಪ್ರಬಲವಾಗಿತ್ತು. ಮುತ್ತಳ್ಳಿಗೆ ಹೂವಯ್ಯ ಬರುವ ಸುದ್ದಿ ತಿಳಿದಾಗ ಸೀತೆ ಅಪರಿಮಿತವಾದ ಸಂತೋಷ ಗೊಳ್ಳುತ್ತಾಳೆ. ತನ್ನ ತಂಗಿ ಲಕ್ಷ್ಮಿಗೆ 'ಹೂವಯ್ಯ ಭಾವ ಬರ್ತಾರೆ ಕಣೆ'[೨] ಎಂದು ಸಾರಿ ಸಾರಿ ಹೇಳುತ್ತಾಳೆ. ಹೂವಯ್ಯನಿಗೆ ಆದ ನೋವನ್ನು ಕಂಡು ಕೇಳಿ ಮರುಕ ಪಡುತ್ತಾಳೆ. ಚಿನ್ನಯ್ಯ ರಾಮಯ್ಯರು ಹೂವಯ್ಯನ ಬೆನ್ನಿಗೆ ಬಿಸಿನೀರು ಶಾಖ ಕೊಟ್ಟು ಆರೈಕೆ ಮಾಡುತ್ತಿದ್ದಾಗ, ಸೀತೆ ಮರೆಯಲ್ಲಿ ನಿಂತು ತನ್ನಷ್ಟಕ್ಕೆ ತಾನೇ ಇವರೇಕೆ ಅವರಿಗೆ ನೋವು ಮಾಡುತ್ತಿದ್ದಾರೆ. ನಾನಾಗಿದ್ದರೆ ನೋವಾಗದಂತೆ ನೋಡಿಕೊಳ್ಳುತ್ತಿದ್ದೆ ಎಂದುಕೊಳ್ಳುತ್ತಾಳೆ. ಹೂವಯ್ಯನ ರೋಗ ಗುಣವಾಗಲು ತಾನು 'ನರ್ಸಮ್ಮ'ನಂತೆ ಸೇವೆ ಮಾಡಲು ಸಿದ್ಧಳಾಗುತ್ತಾಳೆ. ಹೂವಯ್ಯ ತಾನು ಮಲಗಿದ್ದ ಕೊಠಡಿಯಲ್ಲಿ ಹಲ್ಲಿಯು ಹರಿದಾಡುವಾಗ ಗೋಡೆ ಮೇಲಿದ್ದ ಸೀತೆಯ ಬರಹ "ಹೂವಯ್ಯ ಭಾವನನ್ನೇ ಮದುವೆಯಾಗುತ್ತೇನೆ"[೩] ಎಂಬುದು ಆತನಿಗೆ ಗೋಚರವಾಗುತ್ತದೆ. ಸೀತೆಗೆ ಹೂವಯ್ಯನ ಒಡನಾಟ ಹೆಚ್ಚಿದಂತೆ ಈ ಕಾದಂಬರಿಯಲ್ಲಿ ಅವಳು ಹೆಚ್ಚು ಹೆಚ್ಚು ಸಂಸ್ಕಾರಗೊಳ್ಳುತ್ತಾಳೆ; ಭಾವಮಣಿಯಾಗುತ್ತಾಳೆ. ಸೀತೆಗೆ ಹೂವಯ್ಯ ಧರ್ಮ, ದೇವರು, ಸಾಹಿತ್ಯ, ಪೂಜೆ, ಆರಾಧನೆ, ಪ್ರಾರ್ಥನೆ, ಕಣ್ಣೀರು ಎಲ್ಲವುಗಳ ಬಗ್ಗೆ ಜ್ಞಾನವಾಹಿನಿಯನ್ನೇ ಹರಿಸುತ್ತಾನೆ. ಹೂವಯ್ಯನಿಗೆ ಸೀತೆಯ ಸಾನಿಧ್ಯ ಸೀತೆಗೆ ಹೂವಯ್ಯನ ಸಾನಿಧ್ಯ ಅತ್ಯಂತ ಮೃದು ಮಧುರವಾಗಿ ಗೋಚರಿಸುತ್ತದೆ.

ಹೂವಯ್ಯ ಮುತ್ತಳ್ಳಿಯಿಂದ ಕಾನೂರಿಗೆ ಹೊರಟು ಬಂದೊಡನೆ ಸೀತೆಗೆ ಅದುವರೆಗೆ ತನ್ನ ಜೀವನವನ್ನು ತುಂಬಿ ತುಳುಕಾಡುತ್ತಿದ್ದ ಆನಂದವೇ ಮಾಯವಾದಂತಾಗಿ ಆಕೆಯ ಮನಸ್ಸು ನೀರು ಬತ್ತಿಹೋದ ಕೆರೆಯ ಸುತ್ತಣ ವನಪ್ರದೇಶದಂತೆ ಬಿಕೋ ಎನ್ನುವಂತಿತ್ತು. ಈಗ ಸೀತೆ ಮೊದಲಿನ ಸೀತೆ

ಯಾಗಿರಲಿಲ್ಲ. ಕೆಲವು ದಿನಗಳ ಹಿಂದೆ ಬರಿಯ ಹಳ್ಳಿಯ ಹುಡುಗಿಯಾಗಿದ್ದವಳು ಇಂದು ಸುಸಂಸ್ಕೃತ ತರಳೆಯಾಗಿದ್ದಳು. ಸ್ಪರ್ಶಮಣಿಯಿಂದ ಕಬ್ಬಿಣ ಚಿನ್ನವಾಗುವಂತೆ ಹೂವಯ್ಯನ ಸಾನಿಧ್ಯ ಪ್ರಭಾವದಿಂದ ಸೀತೆ ಚಿನ್ನವಾದಳು. ಹೂವಯ್ಯ ಆಕೆಯಲ್ಲಿದ್ದ ಗ್ರಾಮ್ಯ ಜೀವನಕ್ಕೆ ಸಹಜವಾಗಿದ್ದ ಎಷ್ಟೋ ಹೊಸ ಭಾವ ಗಳನ್ನು ನೀಡಿದ್ದ. ಆದರೆ ಅಂತಹ ಮೃದು ಕೋಮಲತೆಯನ್ನು ಸೀತೆ ಮನೆ ಸಿಂಗಪ್ಪಗೌಡರ ಮಗ ಕೃಷ್ಣಪ್ಪನಿಗೆ ಮದುವೆ ಮಾಡಿಕೊಡಬೇಕೆಂದು ತೀರ್ಮಾನವಾಗುತ್ತದೆ. ಇದು ಇಷ್ಟವಿಲ್ಲದ ಸೀತೆ ಕಾಳನ ಜೊತೆ ಮಾತನಾಡುವಾಗ ಕೋಪದಿಂದ 'ನಿನ್ನ ಕೃಷ್ಣಪ್ಪಗೌಡನನ್ನು ಹುಲಿ ಹಿಡಿಲೋ' ನನ್ನ ಸುದ್ದಿಗೆ ಮಾತಾಡಬೇಡವೋ ಎಂದುಬಿಡುತ್ತಾಳೆ. ಸೀತೆಯ ಅದೃಷ್ಟವೋ ಕೃಷ್ಣಪ್ಪನ ದುರಾದೃಷ್ಟವೋ ಎಂಬಂತೆ ಕೊನೆಗೆ ಕೃಷ್ಣಪ್ಪ ಹುಲಿಯ ಬಾಯಿಗೆ ತುತ್ತಾಗುತ್ತಾನೆ. ಕಾನೂರಿನಲ್ಲಿ ದೈಯ್ಯದ ಹರಕೆ ನಡೆದಾಗ ಅಲ್ಲಿಗೆ ಬಂದ ಚಿನ್ನಯ್ಯ ಸೀತೆಗೆ ಹುಷಾರಿಲ್ಲವೆಂದು ಮತ್ತು ಆಕೆಯ ಮದುವೆ ನಿಶ್ಚಯವಾಗಿದೆಯೆಂದು ವಿಚಾರ ತಿಳಿಸಿದಾಗ ನಿಜವಾಗಿ ಹೂವಯ್ಯ ಕಕ್ಕಾಬಿಕ್ಕಿಯಾಗುತ್ತಾನೆ.

ಸೀತೆ ಮದುವೆ ನಿಶ್ಚಯವಾದ ಮೇಲೆ ಅವಳ ರೋಗ ಉಲ್ಬಣವಾಗುತ್ತದೆ. ಕೃಷ್ಣಪ್ಪ ಸತ್ತದ್ದು ಒಳ್ಳೆಯದೇ ಆಯಿತೆಂದು ಸೀತೆ ಸಮಾಧಾನ ಪಟ್ಟರೂ ಕಾಯಿಲೆಯಾದ ತನ್ನನ್ನು ನೋಡಲು ಹೂವಯ್ಯ ಬರಲಿಲ್ಲವಲ್ಲ ಎಂದು ಚಿಂತಿಸುತ್ತಾಳೆ. ಸೀತೆಯ ಆರೋಗ್ಯ ವಿಚಾರಿಸಲು ಬಂದ ಹೂವಯ್ಯ ಸೀತೆಯ ಪರಿಸ್ಥಿತಿಯನ್ನು ನೋಡಿ ತಾನೇ ಹೆಣ್ಣು ಕೇಳಿ ಮದುವೆಯಾಗಬೇಕೆಂದು ನಿಶ್ಚಯಿಸುತ್ತಾನೆ.

ಆದರೆ ಮದುವೆಯಾಗುವವನೇ ಹೆಣ್ಣು ಕೇಳುವುದೇ? ಛೇ... ಬೇಡವೆಂದು ಸುಮ್ಮನಾಗುತ್ತಾನೆ. ಕಾನೂರು ಮನೆ ಪಾಲಾದ ಮೇಲೆ ದ್ವೇಷ ಸಾಧಿಸಿದ ಚಂದ್ರಯ್ಯಗೌಡ ತನ್ನ ಮಗನಾದ ರಾಮಯ್ಯನಿಗೆ ಸೀತೆಯನ್ನು ಮದುವೆ ಮಾಡುತ್ತಾನೆ. ಆದರೆ ಸೀತೆ ಮತ್ತು ರಾಮಯ್ಯರ ಮದುವೆ ದಾಂಪತ್ಯ ಜೀವನ ಯಾವುದೂ ಅಧಿಕೃತವಾದುದಲ್ಲ. ಕೊನೆಯವರೆವಿಗೂ ಸೀತೆ ಹೂವಯ್ಯನಲ್ಲೇ ಅನುರಕ್ತಳಾಗಿದ್ದು, ರಾಮಯ್ಯನ ಮರಣಾನಂತರ ತಾನು ಹೂವಯ್ಯ ಗಂಡ ಹೆಂಡಿರಾಗದೆ ಆದರ್ಶ ಗುರು ಶಿಷ್ಯೆಯರಾಗು ತ್ತಾರೆ ಎಂಬುದು ನಿಜವಾದರೂ ಸೀತೆಯ ಪಾಲಿಗೆ ಇದೊಂದು ದೊಡ್ಡ ದುರಂತ. ರಾಮಾಯಣದ ಸೀತೆಯಂತೆಯೇ ಕುವೆಂಪು ತನ್ನ ಕಾದಂಬರಿಯ ನಾಯಕಿ ಸೀತೆಯ ಪಾತ್ರವನ್ನು ಶೋಕಮಯವಾಗಿ ಚಿತ್ರಿಸಿದ್ದಾರೆ.

### ಗಂಗ ಹುಡುಗ :

ಗಂಗ ಬೇಲರ ಬೈರನ ಮಗ. ಸೇಸಿ ಈತನ ತಾಯಿ. ಗಂಗ ಹುಡುಗ ಮತ್ತು ಪುಟ್ಟ ಯಾವಾಗಲು ವಾಸುವಿನ ಒಡನಾಡಿಗಳು ಮತ್ತು ಅನುಯಾಯಿಗಳು. ವಾಸುವಿನ ಕಾನನದ ಅಲೆದಾಟ,

ಬೇಟೆ, ಹಕ್ಕಿ ಹಿಡಿಯುವುದು, ಸಬೆ ಒಡ್ಡುವುದು ಮುಂತಾದ ಸಾಹಸ ಕಾರ್ಯಗಳಲ್ಲಿ ಗಂಗ ಹುಡುಗನದು ಬೆಂಗಾವಲು. ವಾಸು ಅಣ್ಣಂದಿರಾದ ಹೂವಯ್ಯ ಮತ್ತು ರಾಮಯ್ಯ ಬರುವ ಸುದ್ದಿ ಕೇಳಿ ತಿಳಿದ. ಅವರಿಗಾಗಿ ನಾನಾ ಬಗೆಯ ಹಣ್ಣುಗಳನ್ನು ಸಂಗ್ರಹಿಸಲು ವಾಸು ಗಂಗನನ್ನು ಕರೆದೊಯ್ಯಲು ಸೇಸಿ, ಬೈರನ ಬಿಡಾರಕ್ಕೆ ಹೋಗುತ್ತಾನೆ. ಇಲ್ಲಿಂದ ಗಂಗನ ಕಥನ ಬಿಚ್ಚಿಕೊಳ್ಳುತ್ತದೆ.

ನಾಯಿ ಇದ್ದಕ್ಕಿದ್ದ ಹಾಗೆ ದೂರ ನೋಡಿ ಬೊಗಳಿತು. ಗಂಗ ತಿರುಗಿ ನೋಡಿದರೆ ವಾಸು ಬರುತ್ತಿರುವುದು ಕಾಣಿಸಿತು. ಗಂಗನು ಗಾಬರಿಯಿಂದ ತನ್ನ ಕೈಲಿದ್ದುದನ್ನು ನೆಲದ ಮೇಲೆ ಬಿದ್ದುದ್ದನ್ನು ಬಿಡಾರದೊಳಗಣ ಕತ್ತಲೆಗೆ ಎಸೆದನು. ವಾಸುವನ್ನು ಕುರಿತು 'ನೀವ್ಯಾಕೆ ಬರ್ತೀರಯ್ಯ? ನಾನೆ ಬರತೀನಿ ನಿಲ್ಲಿ' ಎಂದನು. ಅವನ ನಡೆ ನುಡಿಗಳಲ್ಲಿ ಶಂಕೆ ಮತ್ತು ಭಯಗಳಿದ್ದರೂ ವಾಸುವಿಗೆ ಗೊತ್ತಾಗಲಿಲ್ಲ.

ಮಲಿನ ಕೌಪೀನ ವಿನಃ ದಿಗಂಬರನಾಗಿ ಚರ್ಮಕ್ಕೆ ತುಕ್ಕು ಹಿಡಿದಂತೆ ಕಾಣುತ್ತಿದ್ದ ಅವನನ್ನು ನೋಡಿ 'ಕೊಳಲು ಆಯ್ತೇನೋ' ಎಂದು ವಾಸು ಕೇಳಿದಾಗ, ಇಲ್ಲಯ್ಯ ಇನ್ನೂ ಆಗಿಲ್ಲ ಎಂದನು. ವಾಸ್ತವವಾಗಿ ಆತನು ವಾಸು ಹೇಳಿದ ಕೊಳಲನ್ನು ಮಾಡುವ ಗೋಜಿಗೆ ಹೋಗಿರಲಿಲ್ಲ. ಸರಿ ವಾಸು ಸೇಸಿಗೆ ಹೇಳಿ ಗಂಗನನ್ನು ಕರೆದುಕೊಂಡು ವನಸಂಚಾರಕ್ಕೆ ಹೊರಟನು. ಕೆಲವು ದಿನಗಳ ಹಿಂದೆ ವಾಸು, ಗಂಗ, ಪುಟ್ಟ ಮೂವರೂ ಸೇರಿ ಪೊದೆಗಳಲ್ಲಿ ಹುಡುಕುತ್ತಿದ್ದಾಗ ಒಂದು ಪಿಕಳಾರ ಹಕ್ಕಿಯ ಗೂಡು ಕಣ್ಣಿಗೆ ಬಿದ್ದಿತು. ಆ ಗೂಡಿನಲ್ಲಿ ಕೆಂಪು ನೀಲಿ ಬಣ್ಣವಾಗಿ ಚುಕ್ಕಿ ಚುಕ್ಕಿಯಾಗಿದ್ದ ಮೂರು ಪುಟ್ಟ ಮೊಟ್ಟೆಗಳಿದ್ದವು. ಮೊಟ್ಟೆಗಳನ್ನು ಯಾರೂ ತೆಗೆಯಕೂಡದೆಂದೂ ಮರಿಗಳಾದ ಮೇಲೆ ತಾಯಿ ಮತ್ತು ಮರಿಯನ್ನು ಒಟ್ಟಿಗೆ ಹಿಡಿದು ಸಾಕಬೇಕೆಂದು ವಾಸು ಕಟ್ಟಪ್ಪಣೆ ಮಾಡಿದ್ದನು. ಒಂದು ದಿನ ಹೋಗಿ ನೋಡಿದಾಗ ಆ ಮೊಟ್ಟೆಗಳು ಒಡೆದು ಮರಿಗಳಾಗಿದ್ದವು. ವಾಸು ನೋಡಿದಾಗಲೆಲ್ಲಾ ಆ ತುಪ್ಪಳ ರೆಕ್ಕೆ ಪುಕ್ಕಗಳಿಲ್ಲದ ಹಕ್ಕಿ ಮರಿಗಳು ತಮ್ಮ ಕೆಂಪು ಪೊದೆಯ ಬಾಯಿಗಳನ್ನು ತೆಗೆದು ಜಗತ್ತನ್ನೇ ನುಂಗುತ್ತೇವೆಂಬಂತೆ ನೋಡುತ್ತಿದ್ದವು. ವಾಸು ಮತ್ತು ಗಂಗರು ಅವುಗಳಿಗೆ ಹಸಿವೆಯಾಗಿದೆ ಎಂದು ತಿಳಿದು ಅಲ್ಲಿಯೇ ಪಕ್ಕದಲ್ಲಿಯೇ ಯಥೇಚ್ಛವಾಗಿದ್ದ ಲಂಟಾನ ಹಣ್ಣುಗಳನ್ನು ಕೊಯ್ದು ಬಾಯಿ ಮುಚ್ಚುವ ತನಕ ಸುರಿಯುತ್ತಿದ್ದರು. ಹೀಗೆ ವಾಸು, ಗಂಗ ಮತ್ತು ಪುಟ್ಟರು ಆ ಹಕ್ಕಿ ಮರಿಗಳಿಗೆ ಮಲತಾಯಿಯರಂತೆ ಆಹಾರ ನೀಡುತ್ತಿದ್ದರು. ನಂತರ ಮರಿಗಳಿಗೆ ಗರಿ ಮೂಡಲಾರಂಭಿಸಿತು. ವಾಸು ಇವನ್ನು ಸುಮ್ಮನೇ ಬಿಟ್ಟರೆ ತಾಯಿಹಕ್ಕಿ ಮರಿಗಳನ್ನು ಹಾರಿಸಿಕೊಂಡು ಹೋಗಿಬಿಡುತ್ತದೆ ಎಂದು ಭಾವಿಸಿ ಗಂಗ ಪುಟ್ಟರೊಡನೆ ಸಮಾಲೋಚನೆ ಮಾಡಿ, ಆ ಪೊದೆಗೆ ಸಮೀಪದಲ್ಲಿಯೇ ಒಂದು ಸಬ್ಬೆಯೊಡ್ಡಿದರು.

ಮಾರನೆಯ ದಿನ ಗಂಗನೊಡನೆ ಹೊರಟ ವಾಸು ಹೋಗಿ ನೋಡುತ್ತಾನೆ. ಗೂಡಿನಲ್ಲಿ ಮರಿಗಳಿಲ್ಲ, ಬರಿಯ ಗೂಡು ಪಾಳುಬಿದ್ದ ಮನೆಯಂತೆ ಬಿಕೋ ಎನ್ನುತ್ತಿದೆ. ಗಂಗನನ್ನ ವಾಸು, 'ಗಂಗ,

ಮರಿಗಳೆಲ್ಲೊ?' ಎಂದು ಕೇಳಿದಾಗ, ಆತ ತನಗೇನೂ ಗೊತ್ತಾಗದವನಂತೆ ನಾಟಕವಾಡುತ್ತಾನೆ. ಯಾರೂ ಬಡ್ಡಿ ಮಕ್ಕಳು ಕದ್ದುಕೊಂಡು ಹೋಗಿದ್ದಾರೆ ಎಂದು ಬಯ್ಯುತ್ತಾ ಕಾಡನ್ನೆಲ್ಲಾ ಅಲೆದು ಪುನಃ ಗಂಗನ ಬಿಡಾರದ ಕಡೆ ಹೋದಾಗ ಸತ್ಯಾಂಶ ಗೊತ್ತಾಗುತ್ತದೆ. ಗಂಗ ಬಿಡಾರದ ಕಡೆ ಬಂದುದನ್ನು ಕಂಡು ಒಳಗೆ ಕತ್ತಲೆ ಗವಿಯಲ್ಲಿ ಪಾಕ ಕಾರ್ಯದಲ್ಲಿ ತೊಡಗಿದ್ದ ಆತನ ತಾಯಿ ಸೇಸಿ ಗಂಗನನ್ನು ಕೂಗಿ 'ಈ ಹಕ್ಕಿ ತಿಪ್ಪುಳಿಸಿ ಸುಟ್ಟು ಕೊಡೋ' ಎಂದು ಗಂಗನ ಕಾಲ ಬುಡಕ್ಕೆ ಎರಡು ಮರಿಗಳನ್ನು ಎಸೆದು ಹೋಗುತ್ತಾಳೆ. ಅದೇ ಗೀಜಗಾರು ಹಕ್ಕಿ ತಾನು ಹಿಂದಿನ ದಿನ ಹೊಡೆದದ್ದು! ಆ ಮರಿಗಳು ಅದೇ ಪಿಕಳಾರ ಮರಿಗಳು! ಆ ಗೂಡಿನಲ್ಲಿದ್ದಂತಹ ಮರಿಗಳು. ಗಂಗನ ಮೋಸಕ್ಕೆ ಮೂಕಸಾಕ್ಷಿಗಳಾಗಿ ಪಕ್ಷಿ ಶಿಶು ಶವಗಳು ನೆಲದ ಮೇಲೆ ಬಿದ್ದಿದ್ದವು. ಗಂಗ ನಡುಗುತ್ತಾ ನಿಂತಿದ್ದನು. ವಾಸುವಿಗೆ ವಿಷಯವೆಲ್ಲ ಗೊತ್ತಾಗಿ ಅವನ ಮೇಲೆ ಅತಿಯಾದ ಕೋಪ ಬಂದು ಬೇಲರವನನ್ನು ಮುಟ್ಟಬಾರದೆಂದು ಗೊತ್ತಿದ್ದರೂ ವನಕೆಯಿಂದ ಹಿಟ್ಟು ಕುಟ್ಟುವಂತೆ ಗಂಗನ ಮೈಗೆ ಗುದ್ದಿ ವಾಸು ಕೊನೆಗೆ ಅಳುತ್ತಾ ಮನೆಯ ಹಾದಿ ಹಿಡಿಯುತ್ತಾನೆ. ವಾಸು ಗಂಗನನ್ನು ಎಷ್ಟೊಂದು ಆತ್ಮೀಯವಾಗಿ ನೋಡಿದ್ದರೂ ಅವನು ವಾಸುವಿಗೆ ಹಕ್ಕಿ ಮರಿಗಳ ವಿಚಾರದಲ್ಲಿ ಮೋಸ ಮಾಡುತ್ತಾನೆ. ತಾನೇ ಆ ಎಳೆಯ ಮುದ್ದಾದ ಹಕ್ಕಿ ಮರಿಗಳನ್ನು ಕದ್ದು ಅವುಗಳನ್ನ ಸಾಯಿಸಿ ತಿನ್ನುವ ಸಾಹಸ ಮಾಡುತ್ತಾನೆ. ಆದರೆ ವಾಸು ಕೇಳಿದಾಗ 'ನಾ ಈ ಕಡೆ ಬರ್ಲಿಲ್ಲ ದೇವ್ರಾಣೆ. ಪುಟ್ಟಯ್ಯ ಏನಾದರು ಬಂದಿದ್ದರೋ ಏನೋ.' ಎಂದು ತನ್ನ ತಪ್ಪನ್ನು ಪಾಪ ಪುಟ್ಟನ ಮೇಲೆ ಹೊರಿಸಲು ಸಂಚು ಮಾಡುತ್ತಾನೆ. ಕಾಡಿನಲ್ಲಿ ವಾಸಿಸುವ ಕಾಡು ಜನರ ಜೀವನ ಕ್ರಮಕ್ಕೆ ಹತ್ತಿರವಾಗಿದ್ದ ಬೇಲರ ಗಂಗನಿಗೆ ಹಕ್ಕಿಯ ವಿಚಾರವಾಗಿ ವಾಸುವಿಗಿದ್ದಂತೆ ಯಾವ ಮಮಕಾರವೂ ಇರಲಿಲ್ಲ. ಅದಕ್ಕೆ ಕೇವಲ ಒಂದು ಬಗೆಯ ಆಹಾರವಾಗಿ ನೋಡುವುದಷ್ಟೇ ಗಂಗನಿಗೆ ಗೊತ್ತು. ಅದಲ್ಲದೆ ದಲಿತ ವರ್ಗದವರ ಹಸಿವಿನ ತೀವ್ರತೆಯ ಮುಂದೆ ಯಾವ ಪ್ರೀತಿ, ಮಮಕಾರಗಳು ಬೆಳೆದು ನಿಲ್ಲಲು ಸಾಧ್ಯ? ಎನ್ನುವ ಕಟುಸತ್ಯವನ್ನು ಕುವೆಂಪುರವರು ಗಂಗನ ಪಾತ್ರದ ಮೂಲಕ ನಿರೂಪಿಸುತ್ತಾರೆ.

ಇನ್ನೊಮ್ಮೆ ವಾಸು ಒಂದೆಡೆ ಬಾಳೆ ಪೊದರಿನ ಬುಡದಲ್ಲಿ ಕುಣಿ ತೋಡಿ ಒಣಹುಲ್ಲು ಹಾಕಿ ಯಾರಿಗೂ ತಿಳಿಯದಂತೆ ಬಾಳೆಯ ಗೊನೆಗಳನ್ನು ಕಡಿದು ಬಚ್ಚಿಟ್ಟು ಹಣ್ಣು ಮಾಡಿಕೊಂಡು ಬೇಕಾದಾಗ ಒಂದು ಪಳಾರ ಮಾಡುವ ಅಭ್ಯಾಸ ಇಟ್ಟುಕೊಂಡಿದ್ದ. ಬೇಲರ ಬೈರನ ಮಗ ಗಂಗನು ವಾಸುವಿನ ಗುಂಪು ಬರುತ್ತಿರುವುದನ್ನು ನೋಡಿ ತಿನ್ನುತ್ತಿದ್ದ ಹಣ್ಣನ್ನು ಬೇಗ ಬೇಗನೆ ಪೂರೈಸಿ ಉಳಿದೆಲ್ಲವನ್ನು ಮೊದಲಿನಂತೆಯೇ ಬಚ್ಚಿಟ್ಟು ಒಣಗಿ ನೇತಾಡುತ್ತಿದ್ದ ಬಾಳೆ ಎಲೆಗಳ ಮರೆಯಲ್ಲಿ ಅಡಗಿಕೊಂಡನು. ಆದರೆ ನಾಯಿಯೊಂದು ಸರಸರ ಸದ್ದಾಗುವುದನ್ನು ಆಲಿಸಿ ಆ ಕಡೆ ನೋಡಿ ಬೊಗಳತೊಡಗಿತು. ವಾಸು ಆ ಕಡೆ ನೋಡಿದನು. ವಾಸುವಿನ ಕಣ್ಣಿಗೆ ಗಂಗನು ಕಾಣಲಿಲ್ಲ. ಆದರೆ ಬರುತ್ತಿದ್ದವರ ಕಡೆಯೇ ಉದ್ವೇಗದಿಂದ ನೋಡುತ್ತಾ ನಿಂತಿದ್ದ ಗಂಗನು ವಾಸಯ್ಯ ತನ್ನನ್ನು ನೋಡಿದರೆಂದು ಭಾವಿಸಿ, ತಾನು

ಅಡಗಿ ನಿಂತಿಲ್ಲ ಎಂಬುದನ್ನು ತೋರಿಸಲೆಂಬಂತೆ ಅಚೀ.. ಅಚೀ.. ಎಂದು ನಾಯಿಯನ್ನು ಬೆದರಿಸಿದನು. ವಾಸು ಅವನು ಅವಿತಿದ್ದನ್ನು ಕಂಡು ಸಂಶಯದಿಂದ ಅವನ ಬಳಿಗೆ ಹೋದನು. ಗಂಗನು ಎಲ್ಲವನ್ನು ಮರೆಮಾಡಿದ್ದರೂ ತಾನು ತಿಂದು ಪಕ್ಕದಲ್ಲಿ ಎಸೆದಿದ್ದ ಬಾಳೆಯ ಹಣ್ಣಿನ ಸಿಪ್ಪೆಗಳನ್ನು ಮರೆತು ಅಡಗಿಸಿರಲಿಲ್ಲ. ಅದನ್ನು ಕಂಡ ವಾಸು ಏನ್ಮಾಡ್ತಾ ಇದ್ದೀಯೋ ಇಲ್ಲಿ? ಎಂದು ಕೇಳಿದನು. 'ಏನೂ ಇಲ್ಲಯ್ಯ ಬಾಳೆ ಸರಬಲಿಗೆ ಬಂದಿದ್ದೆ'[2] ಎಂದನು ಗಂಗ. ಹಕ್ಕಿಯ ಗೂಡಿಂದ ಹಕ್ಕಿ ಮರಿಗಳನ್ನು ಕದ್ದು ಹೋದ ವಿಚಾರವನ್ನು ವಾಸು ಮರೆತಿರಲಿಲ್ಲ. 'ಕಳ್ಳ ಸುಳ್ಳು ಹೇಳ್ತೀಯ?' ಎಂದು ನೆಲವನ್ನು ಹುಡುಕತೊಡಗಿದನು. ಕಳ್ಳನ ಗುರುತು ಕಳ್ಳನಿಗೇ ಗೊತ್ತು ಎಂಬಂತೆ ಅಂತಹ ಕೆಲಸಗಳಲ್ಲಿ ನುರಿತಿದ್ದ ವಾಸುವಿಗೆ ಬಚ್ಚಿಟ್ಟಿದ್ದ ಬಾಳೆಹಣ್ಣುಗಳನ್ನು ಕಂಡು ಹಿಡಿಯುವುದು ಕಷ್ಟವೇನೂ ಆಗಲಿಲ್ಲ. ವಾಸು ತನ್ನ ಅಣ್ಣಂದಿರನ್ನು ಕರೆದು ಗಂಗನ ಕಳ್ಳತನವನ್ನು ಬಯಲು ಮಾಡಿದನು. ಎಲ್ಲರು ಹತ್ತಿರ ಬಂದು ನೋಡಿದರು. ಮಾಗಿದ್ದ ಹಳದಿ ಹೊಂಬಣ್ಣದ ಬಾಳೆಯ ಹಣ್ಣುಗಳು ಹುಲ್ಲು ಹಾಸಿದ್ದ ಕುಣಿಯಲ್ಲಿ ಕುಳಿತು ಕಂಪು ಬೀರುತ್ತಿದ್ದವು. ಗಂಗನು ಕಣ್ಣೀರು ಸುರಿಸುತ್ತಾ ನಿಂತಿದ್ದನು. ವಿಷಯವನ್ನೆಲ್ಲಾ ತಿಳಿದ ಮೇಲೆ ಹೂವಯ್ಯ ಅವನನ್ನು ಹೆದರಿಸದೇ ಅದಷ್ಟೇ ಹಣ್ಣುಗಳನ್ನು ಎಲ್ಲರಿಗೂ ಹಂಚಿಕೊಟ್ಟು, ಉಳಿದುದ್ದನ್ನು ಗಂಗನ ಕೈಯ್ಯಲ್ಲಿ ಮನೆಗೆ ಕೊಡುವಂತೆ ಹೇಳಿ ಕೊಟ್ಟನು. ಗಂಗನಿಗೆ ಪಶ್ಚಾತ್ತಾಪವಾಯಿತು. ಆದರೆ ವಾಸುವಿಗೆ ಮಾತ್ರ ಕಳ್ಳನಿಗೆ ತಕ್ಕ ಶಿಕ್ಷೆ ಸಿಗಲಿಲ್ಲವೆಂದು ಆಶಾಭಂಗವಾಯಿತು.

ಹೀಗೆ ಆರಂಭದಿಂದಲೂ ಕಳ್ಳತನದಲ್ಲಿಯೇ ಪಳಗಿದ ಗಂಗಹುಡುಗ ಕೆಟ್ಟದಾರಿಯಲ್ಲೇ ನಡೆಯುತ್ತಾನೆ. ತನ್ನ ತಂದೆ ತಾಯಿಯರಿಗೆ ಗೊತ್ತಿಲ್ಲದಂತೆ ಕಳ್ಳಂಗಡಿಯಲ್ಲಿ ಸಾಲ ಮಾಡಿ ತಲೆತಪ್ಪಿಸಿಕೊಳ್ಳುತ್ತಾನೆ. ಅನೇಕ ಸಲ ಅವನು ತಾನು ಮಾಡಿದ ಸಾಲ ತೀರಿಸಲು ಅವರಿವರ ತೋಟ ಹಿತ್ತಲುಗಳಿಂದ ತರಕಾರಿ, ಬದನೇಕಾಯಿ, ಬಾಳೆಗೊನೆ, ಕುಂಬಳಕಾಯಿ ಮುಂತಾದವುಗಳನ್ನು ಕದ್ದು ಸಾಲ ತೀರಿಸಿದ್ದನು. ಕೆಲವು ಸಾರಿ ಗೌಡರ ಮನೆಯಿಂದ ಕತ್ತಿ, ಗುದ್ದಲಿ ಮುಂತಾದ ಹತಾರಗಳನ್ನು ಕದ್ದು ಕಳ್ಳಂಗಡಿಗೆ ಸಾಗಿಸಿದ್ದನು. ಹೆಂಡ ಕುಡಿಯುವ ಚಪಲತೆ ಅವನನ್ನು ಅಷ್ಟು ಚಿಕ್ಕಂದಿನಲ್ಲಿಯೇ ಕಳ್ಳತನದಲ್ಲಿ ಪ್ರವೀಣನಾಗುವಂತೆ ಮಾಡಿಬಿಟ್ಟಿತು.

ಗಂಗ ಹುಡುಗ ಕಣ್ಣಿಗೆ ಬೀಳದಂತೆ ತಪ್ಪಿಸಿಕೊಂಡಿದ್ದ ವಿಚಾರವನ್ನು ತಿಳಿದ ಕೂಡಲೇ ಕಳ್ಳಂಗಡಿಯವನು ಆ ವಿಚಾರವನ್ನೆಲ್ಲ ಬೈರನಿಗೆ ಹೇಳಿದನು. ಅದನ್ನು ಕೇಳಿದ ತಂದೆ ಬೈರನಿಗೆ ಸಿಡಿಲು ಬಡಿದಂತಾಯಿತು. ತನ್ನ ಮಗನು ತನಗಿಂತ ಗಟ್ಟಿಗನಾಗಿ ಕಳ್ಳಂಗಡಿಯಲ್ಲಿ ಸ್ವತಂತ್ರವಾಗಿ ಸಾಲ ಮಾಡುವನೆಂದು ಕನಸಿನಲ್ಲಿಯೂ ಊಹಿಸಿರಲಿಲ್ಲ. ತನ್ನ ಮಗನನ್ನು ಹಿಡಿದು ಕಳ್ಳಂಗಡಿಯ ಮುಂದೆ ಚೆನ್ನಾಗಿ ಹೊಡೆದನು. ನಂತರ ರೇಗುತ್ತಾ 'ಸಣ್ಣ ಸಣ್ಣ ಹುಡುಗರು ಮಕ್ಕಳಿಗೆಲ್ಲಾ ಸಾಲ ಕೊಡಾಕೆ ಹೇಳಿದೋರ್‍ಯಾರು ನಿನಗೆ?

ನೀವೇ ಏನಾದರೂ ಮಾಡಿ ಸಾಲ ವಸೂಲಿ ಮಾಡಿಕೊಳ್ಳಿ. ನನ್ನ ಹತ್ರ ಕೇಳಬೇಡಿ."ಎಂದನು. ಕಳ್ಳಂಗಡಿಯವನು ಗಂಗನನ್ನು ಹಿಡಿದುಕೊಂಡು ಸಾಲ ಕೊಡ್ತೀಯೋ? ಇಲ್ಲವೋ? ಎಂದು ಜೋರು ಮಾಡಿದಾಗ, ಗಂಗ ಅವನನ್ನು ಕರೆದುಕೊಂಡು ಕಾನೂರಿನ ಸಮೀಪದಲ್ಲಿದ್ದ ಒಂದು ಕಾಡಿಗೆ ಹೋಗಿ ಮಣ್ಣು ಇನ್ನು ಹಸಿಯಾಗಿದ್ದ ಒಂದು ಸ್ಥಳವನ್ನು ತೋರಿಸಿದನು. ಇಬ್ಬರು ಸೇರಿ ಅಗೆದು ನೋಡಲು ನಾಲ್ಕಾರು ಕೆಲಸದ ಕತ್ತಿಗಳು, ಎರಡು ಹಿತ್ತಾಳೆ ಚೊಂಬುಗಳು, ಒಂದು ಹಾರೆ, ಒಂದು ಗುದ್ದಲಿ, ಕೆಲವು ನೇಗಿಲ ಕುಳಗಳು ಸಿಕ್ಕಿದವು. ಗುಂಡಿಯಲ್ಲಿ ನಿಂಗ ಅವಿತಿಟ್ಟ ತನ್ನ ಮನೆಯ ಸಾಮಗ್ರಿಗಳನ್ನು ಗಂಗ ಚಿಟ್ಟುಕೋಳಿ ಬೇಟೆ ಆಡಲು ಹೋಗಿದ್ದಾಗ ನೋಡಿದ್ದು ಕಳ್ಳಂಗಡಿಯವನಿಗೆ ತೋರಿಸಿದನು. ಆಗ ಅವನ ಸಾಲ ತೀರಿ ಮತ್ತಷ್ಟು ಕಳ್ಳು, ಹೆಂಡ, ಒಣಗಿದ ಮೀನುಗಳ ಸಮಾರಾಧನೆಯಾಗಿತ್ತು ಗಂಗನಿಗೆ. ಕೊನೆಗೆ ತನ್ನ ಸಾಮಗ್ರಿಗಳನ್ನು ಹೊರತೆಗೆಯಲು ಹೋದ ನಿಂಗನಿಗೆ ಆಘಾತವಾಗಿ ತನ್ನ ವಸ್ತುಗಳನ್ನು ಯಾರೋ ಕದ್ದರೆಂದು ಬಯ್ಯುತ್ತಾ ಗೋಳಾಡತೊಡಗಿದನು. ಡೊಳ್ಳು ಹೊಟ್ಟೆಯ ಸೋಮನ ಆದೇಶದಂತೆ ದೆಯ್ಯದ ಹರಕೆಯಾಗಿ ತೆಂಗಿನ ಕಾಯಿಯನ್ನು ಎಲ್ಲರ ಕೈಲೂ ಮುಟ್ಟಿಸಿದರೆ ಕದ್ದ ಸಾಮಗ್ರಿಗಳು ಹೊರಗೆ ಬರ್ತವೆ ಎಂದು ನಂಬಿ ಹಾಗೆ ಮಾಡಿದನು. ಬೇಲರ ಗಟ್ಟದಾಳುಗಳು, ಹಳೇಪೈಕದವರು ಎಲ್ಲರೂ ಆ ತೆಂಗಿನ ಕಾಯಿಯನ್ನು ಮುಟ್ಟಲು ಗಂಗ ಮಾತ್ರ ಹೆದರಿಬಿಡುತ್ತಾನೆ. ಸೇಸಿ ತಮಗಾದ ಅವಮಾನದಿಂದ ಬಲ ವಂತವಾಗಿ ತೆಂಗಿನ ಕಾಯಿಯನ್ನು ಮುಟ್ಟಿಸಿದಾಗ, ಭೂತರಾಯನ ಮೇಲೆ ಅಪಾರ ನಂಬಿಕೆ, ಭಕ್ತಿ, ಭಯಗಳಿದ್ದ ಜನ ಸಮುದಾಯದ ದಂತಕಥೆಗಳನ್ನು ಕೇಳಿದ್ದ ಗಂಗ ಒಂದು ರೀತಿಯಾಗಿ ವಿಭ್ರಮೆ ಗೀಡಾಗಿ ಯಾವ ಔಷಧಿಯು ಅವನಲ್ಲಿ ಕೆಲಸ ಮಾಡದೆ, ಸತ್ತು ಹೋಗುತ್ತಾನೆ.

**ಪುಟ್ಟ :**

ಕಾನೂರು ಹೆಗ್ಗಡಿತಿ ಕಥೆಯಲ್ಲಿ ಬರುವ ಈ ಪುಟ್ಟ ಚಂದ್ರಯ್ಯಗೌಡರ ಗಾಡಿಯಾಳು ನಿಂಗನ ಮಗ. ಯಾವಾಗಲು ವಾಸುವಿನ ಒಡನಾಡಿ. ಕಥೆಯ ಆರಂಭದಲ್ಲಿ ಆತನ ಕಾಲಿಗೆ ಮುಳ್ಳು ಚುಚ್ಚಿ ಕೀವಿನಿಂದ ಜಡ್ಡಿಡಿದು ನೋವಿನಿಂದ ಮಲಗಿರುತ್ತಾನೆ. ವಾಸುವಿನ ಜೊತೆ ಕಾಡನ್ನು ಅಲೆಯುವುದು, ಶಿಕಾರಿಗೆ ಹೊರಡುವುದು ಮುಂತಾದ ಕೆಲಸಗಳಲ್ಲಿ ಪುಟ್ಟನಿಗೂ ಅತೀವ ಆಸಕ್ತಿ. ವಾಸು ಅಣ್ಣಂದಿರು ಗಳಿಗೆ ಹಣ್ಣುಗಳನ್ನು ಕೊಯ್ದು ತರಲು ಕಾಡಿಗೆ ಹೊರಡುವಾಗ ಕಿರು ಜಗಲಿಯ ಒಂದು ಮೂಲೆಗೆ ಒಂದು ಮುದ್ದೆಯಾಗಿ ಬಿದ್ದಿದ್ದ. ಒಂದು ಕಂಬಳಿಯ ಬಳಿ ನಿಂತು ಏ ಪುಟ್ಟ ನಿನ್ನೆ ಹೇಳಿದ್ದು ಕೆಲಸ್ಕೆ ಬರ್ತಿ ಯೇನೋ ಎಂದು ಕರೆಯತ್ತಾನೆ. ನಿನ್ನೆ ಮುಳ್ಳು ಚುಚ್ಚಿದ್ದು ಬಹಳ ನೋವಾಗಿದೆ ನಾ ಬರೋದಿಲ್ಲ ನೀವೆ ಹೋಗಿ ಎನ್ನುತ್ತಾನೆ ಪುಟ್ಟ. ರಬ್ಬರ್ ಬಿಲ್ಲು ಎಲ್ಲಿದೆಯೋ ಎಂದು ವಾಸು ಕೇಳಿದಾಗ, ಪುಟ್ಟನು ತಲೆ ಗೆದರಿ, ಜೊಲ್ಲು ಸುರಿದು, ಕಣ್ಣಿನಲ್ಲಿ ಹಿಕ್ಕೆಕಟ್ಟಿ ವಿಕಾರವಾಗಿದ್ದ ತನ್ನ ಮುಖವನ್ನು ಕಂಬಳಿಯಿಂದ

ಹೊರಗೆ ಹಾಕಿ, ವಾಸುವನ್ನು ನೋಡಿ, ಆ ಹೆಬ್ಬಾಗಿಲ ಸಂದೀಲಿ ಹಾರೆ ಪಿಕಾಸಿ ಇಡ್ತಾರಲ್ಲಾ! ಅಲ್ಲೊಂದು ಕೆಮ್ಮಣ್ಣು ಬುಟ್ಟಿ ಇಟ್ಟಾರಲ್ಲ! ಅದರ ಹತ್ರ ಒಂದು ಕೂಣಿ ಇದೆ. ದೊಡ್ಡದಲ್ಲ ಸಣ್ಣದು. ಬೈರ ಮಾಡಿದ್ದಲ್ಲ, ಸಿದ್ದ ಮಾಡಿದ್ದು. ಅದರ ಹತ್ತಿರದ ಹುಣ್ಸೇ ಮರದ ಬೇರಿನ ಸಂದೀಲಿಟ್ಟೇನಿ ಎಂದು ಸವಿಸ್ತಾರವಾದ ಪರಿಚಯವನ್ನು ಹೇಳುತ್ತಾನೆ.

ನಿಂಗ ಕಾನೂರು ಚಂದ್ರಯಯ್ಯಗೌಡರ ಜೊತೆ ಧರ್ಮಸ್ಥಳಕ್ಕೆ ಯಾತ್ರೆ ಹೋಗಿದ್ದ. ನಿಂಗನು ನಿನ್ನೆ ಮುತ್ತಳ್ಳಿಗೆ ಬಂದಂತೆ ವಾರ್ತೆಯನ್ನು ಕೇಳಿದ ಪುಟ್ಟ ತನ್ನ ತಂದೆಯನ್ನು ನೋಡುತ್ತೇನೆ ಎಂದು ಹಿಗ್ಗಿ ಹೆಬ್ಬಾಗಲಾದನು. ತಾಯಿ ತೀರಿಹೋಗಿದ್ದ ಆ ಹುಡುಗನಿಗೆ ನಿಂಗನೇ ತಂದೆ ತಾಯಿ ಎಲ್ಲಾ ಆಗಿದ್ದನು. ಅಲ್ಲದೇ ಸೆರೆಗಾರರು ರಾತ್ರಿ ಮಲಗಿ ನಿದ್ದೆ ಮಾಡುತ್ತಿದ್ದ ತನ್ನನ್ನು ದೊಣ್ಣೆಯಿಂದ ದನ ಹೊಡೆಯುವ ಹಾಗೆ ಹೊಡೆದಾಗಿನಿಂದ ಅವನಿಗೆ ತನ್ನ ತಂದೆಯನ್ನು ಎಂದಿಗೆ ನೋಡೇನು? ಎಂದಿಗೆ ಮುಟ್ಟೇನು? ಎಂದಿಗೆ ಮಾತನಾಡಿಸೇನು? ಎಂಬುದಾಗಿ ಕಾತುರ ಹೆಚ್ಚಾಗಿತ್ತು. ರಾತ್ರಿಯಲ್ಲಿ ಪುಟ್ಟನಿಗೆ ಏನೇನೋ ಕನಸುಗಳು. ಸರಿಯಾಗಿ ನಿದ್ರೆಯೇ ಬರಲಿಲ್ಲ. ಎಲ್ಲಾ ಕನಸುಗಳಿಗೆ ಅಪ್ಪಯ್ಯನೇ ಕೇಂದ್ರವಾದಂತಿದ್ದ. ತನ್ನ ಕನಸಿನಲ್ಲಿ ಅಪ್ಪ ಬಂದಂತೆ ತಾನು ಅವನನ್ನು ಅಪ್ಪಿಕೊಂಡಂತೆ ತನ್ನ ಕಥೆಯನ್ನೆಲ್ಲ ಹೇಳಿಕೊಂಡು ಕಣ್ಣೀರು ಸುರಿಸುತ್ತಿದ್ದ ಪುಟ್ಟನಿಗೆ ನಿಂಗನು ಸಮಾಧಾನ ಹೇಳುತ್ತಾ ಅವನ ಕಣ್ಣೀರನ್ನು ಒರೆಸುತ್ತಿದ್ದನು. ಮತ್ತೊಮ್ಮೆ ಕನಸಿನಲ್ಲಿ ಅಪ್ಪಯ್ಯ ಎಲ್ಲಿಗೋ ಹೋಗಿಬಿಟ್ಟಂತೆ. ತನ್ನನ್ನು ಹೊಡೆದು ತಳ್ಳಿದಂತೆ. ಯಾವುದೋ ಹೊಳೆಯಲ್ಲಿ ಬಿದ್ದು ತೇಲಿ ಹೋದಂತೆ. ಏನೇನೋ ಭಯಂಕರ ಸನ್ನಿವೇಶಗಳು ಕಾಣುತ್ತಿದ್ದವು. ಅಂತು ಬೆಳಕು ಬಿಡುವ ಮೊದಲೇ ಮೇಲೆದ್ದ ಪುಟ್ಟ ಕಾನೂರಿನ ಗಾಡಿ ಬರುವುದನ್ನು ಕಾಯುತ್ತಿದ್ದನು. ಅನೇಕ ಸಾರಿ ಗಾಡಿ ಬಂದಂತೆ ಸದ್ದು ಕೇಳಿ ನಿರೀಕ್ಷಿಸಿ ಸೋತು ಹೋಗಿದ್ದರೂ ಕತ್ತಲಾಗುವವರೆಗೆ ಕಾಯುವುದನ್ನು ಬಿಡಲಿಲ್ಲ. ಕತ್ತಲೆಯಾದ ಮೇಲೆ ಮನೆ ಹೊರಗೆ ಇರಲು ಹೆದರಿ ಒಳಗೆ ಹೋಗಿ ಮೂಲೆಯಲ್ಲಿ ಕುಳಿತು ಬಿಕ್ಕಿ ಬಿಕ್ಕಿ ಅಳುತ್ತಿದ್ದಾಗಲೇ ಗಾಡಿಯ ಸದ್ದು ಕೇಳಿಸಿತು. ತಕ್ಷಣವೇ ಪುಟ್ಟ ಗಾಡಿ ನಿಲ್ಲುವ ಹೊರ ಅಂಗಳಕ್ಕೆ ಓಡಿದನು. ಗಾಡಿ ಬಂದು ಮನೆಯ ಮುಂದೆ ನಿಂತಿತು. ಗಾಡಿ ಹೊಡೆಯುವವನು ಎತ್ತುಗಳನ್ನು ನೊಗದಿಂದ ಕಳಚಿದನು. ಹೊಗೆ ಹಿಡಿದ ಲಾಟಿನಿನ ಮಬ್ಬಿನಲ್ಲಿ ಯಾರೊಬ್ಬರೂ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಅವರ ಮಾತಿನ ಧ್ವನಿ ಹಿಡಿದು ಚಂದ್ರಯ್ಯಗೌಡ, ರಾಮಯ್ಯ, ವಾಸು, ಪುಟ್ಟಮ್ಮ ಇವರೇ ಎಂದು ಗೊತ್ತಾಯಿತು. ಆದರೆ ಪುಟ್ಟನಿಗೆ ಚಿರಪರಿಚಿತವಾಗಿದ್ದ ನಿಂಗನ ಧ್ವನಿಯೇ ಕೇಳಿಸಲಿಲ್ಲ. ಅವನ ಧ್ವನಿ ಅಪರಿಚಿತವಾಗಿದೆ. ಆದರೆ ಅಪ್ಪಯ್ಯನಿಲ್ಲ. ಗಾಡಿ ಹೊಡೆಯುವವನೇ ಅಪ್ಪಯ್ಯನಿರಬೇಕು. ಹೊಸ ನೀರು ಕುಡಿದು ಗಂಟಲು ಹೊಡೆದು ಹೋಗಿರಬಹುದು. ಬೇರೆ ಯಾರು ತಾನೆ ಕಾನೂರಿನ ಗಾಡಿ ಹೊಡೆಯಲು ಬಂದಾರು ಎಂದು ನಾನಾ ವಿಧವಾಗಿ ಚಿಂತಿಸುತ್ತಿದ್ದ ಪುಟ್ಟ ಎಲ್ಲರು ಮನೆಯೊಳಗೆ ಹೋದ ಮೇಲೆ ಅಪ್ಪ ಎಂದು ಕರೆಯುತ್ತ, ಮೊಬ್ಬು ಬೆಳಕಿನಲ್ಲಿ ಗಾಡಿಯವನ ಅಂಗಿಯ

ತುದಿಯನ್ನು ಹಿಡಿದು ಎಳೆದನು. ಆದರೆ ಆ ವ್ಯಕ್ತಿ ಪುಟ್ಟನ ತಂದೆಯಾಗಿರಲಿಲ್ಲ. ವಿಕಾರವಾಗಿದ್ದ ಆ ಧ್ವನಿ 'ಯಾರು ಪುಟ್ಟನೇನೋ? ನಿನ್ನ ಅಪ್ಪಯ್ಯ ಹಿಂದಿನಿಂದ ಬರುತ್ತಾನೋ. ಇವತ್ತು ಬರಲಿಲ್ಲ" ಎಂದಿತು. ತಂದೆಯ ವಿಚಾರವಾಗಿ ವಾಸುವನ್ನು ಹೂವಯ್ಯನನ್ನು ವಿಚಾರಿಸಿದಾಗ ಪುಟ್ಟನಿಗೆ ಗೊತ್ತಾದ ವಿಚಾರ ವೆಂದರೆ ನಿಂಗನಿಗೆ ಖಾಯಿಲೆಯಾದುದರಿಂದ ಅವನು ಆಗುಂಬೆ ಆಸ್ಪತ್ರೆಯಲ್ಲಿದ್ದಾನೆ ಎಂಬುದು. ಆದರೆ ಸತ್ಯಾಂಶವೆಂದರೆ ಚಂದ್ರಯ್ಯಗೌಡರ ಗಾಡಿಯನ್ನು ಹೊಡೆದುಕೊಂಡು ಧರ್ಮಸ್ಥಳಕ್ಕೆ ಹೋದ ನಿಂಗ ಹಿಂದಕ್ಕೆ ಬರುವಾಗ ಕಾಯಿಲೆಯಿಂದ ಅಸುನೀಗಿರುತ್ತಾನೆ.

ಕಾನೂರು ಹೆಗ್ಗಡಿತಿ ಸುಬ್ಬಮ್ಮನು ಚಂದ್ರಯ್ಯಗೌಡರ ಮೇಲೆ ಮೋಹನ ಬಲೆ ಬೀಸಿರುವ ಗಂಗೆಗೆ ಗೊತ್ತಾಗದಂತೆ ಆಭರಣಗಳನ್ನು ಸ್ಥಳಾಂತರಿಸುವ ಕೆಲಸದಲ್ಲಿ ಪುಟ್ಟನು ಸಹಕಾರ ನೀಡುತ್ತಾನೆ. ಸುಬ್ಬಮ್ಮ ನಿಂಗನ ಮಗ ಪುಟ್ಟನನ್ನು ಗುಟ್ಟಾಗಿ ಕರೆದು ತಿಂಡಿ ಕೊಟ್ಟು ಪುಸಲಾಯಿಸಿ, ತಾನು ಕೊಡುವ ಸಾಮಾನನ್ನು ಕಿಟಕಿ ಆಚೆ ಅವಿತು ನಿಂತು ತೆಗೆದುಕೊಂಡು ಹೋಗಿ ದೂರದ ಒಂದು ಪೊದೆಯಲ್ಲಿ ಬಚ್ಚಿಡಬೇಕೆಂದು ಅವನಿಗೆ ತಾಕೀತು ಮಾಡುತ್ತಾಳೆ. ಹಾಗೆಯೇ ಪುಟ್ಟ ಸುಬ್ಬಮ್ಮ ಎತ್ತಿಕೊಟ್ಟ ಎಲ್ಲ ಒಡವೆ ವಸ್ತ್ರಗಳನ್ನು ಗಂಗೆಗೆ ಕಾಣದಂತೆ ಗೌಪ್ಯವಾಗಿ ಶೇಖರಿಸಿ ಹೆಗ್ಗಡಿತಿಗೆ ಋಣಿಯಾಗುತ್ತಾನೆ. ನಂತರದಲ್ಲಿ ಸೇರೆಗಾರರು ಗಾಡಿ ಆಳು ನಿಂಗನ ಮಗ ಪುಟ್ಟನನ್ನು ಹಿಡಿದು ಕೊಂದುಹಾಕಿದ್ದಾರೆ ಎಂಬ ವರ್ತಮಾನ ಹಬ್ಬುತ್ತದೆ. ಹೂವಯ್ಯ ಕಾನೂರಿಗೆ ಹೋಗಿ ವಿಚಾರಿಸಿದಾಗ ಗಂಗೆಯಾಗಲಿ ಸೇರೆಗಾರರಾಗಲಿ ಸರಿಯಾದ ಉತ್ತರ ನೀಡುವುದಿಲ್ಲ. ತೀರ್ಥಹಳ್ಳಿಯಿಂದ ಪೋಲಿಸರನ್ನು ಕರೆಸುವೆನೆಂದು ಹೇಳಿದರು ಸಹ ಪ್ರಯೋಜನವಾಗಲಿಲ್ಲ. ಕೊನೆಗೆ ಸೇರೆಗಾರರು ಮತ್ತು ಗಂಗೆಗೆ ಹೊಡೆತ ಬಿದ್ದ ತಕ್ಷಣ ಗಂಗೆ ಬಾಯ್ಬಿಟ್ಟಳು. 'ಸೇರೆಗಾರರು ಪುಟ್ಟನನ್ನು ಹೊಡೆದು ಆ ಕೋಣೆಯಾಗೆ ಹಾಕಿ ಬೀಗ ಹಾಕಿದ್ದಾರೆ' ಎಂದು ಹೇಳುತ್ತಾಳೆ. ಹೋಗಿ ನೋಡಿದಾಗ ಕಂಬಳಿಯಲ್ಲಿ ಸುತ್ತಿದ್ದ ಪುಟ್ಟನ ಕಳೇಬರದಲ್ಲಿ ಇನ್ನೂ ಪ್ರಾಣ ಹೋಗಿರಲಿಲ್ಲ. ಪೆಟ್ಟು ಬಿದ್ದು ಮೂರ್ಛೆ ಹೋಗಿದ್ದ ಪುಟ್ಟನನ್ನು ಸೇರೆಗಾರರು ಕುಡಿದ ಮತ್ತಿನಲ್ಲಿ ಸತ್ತನೆಂದು ಭಾವಿಸಿ ತರುವಾಯ ಗೌಪ್ಯವಾಗಿ ಹೂಳಲೆಂದು ಕಂಬಳಿಯಲ್ಲಿ ಸುತ್ತಿ ಕೋಣೆಗೆ ಹಾಕಿದ್ದರು. ಸ್ವಲ್ಪ ಚಿಕಿತ್ಸೆ ಮಾಡಿದ ನಂತರ ಪುಟ್ಟ ಚೇತರಿಸಿಕೊಳ್ಳುತ್ತಾನೆ.

ರಾಮಯ್ಯನ ಕೈ ಹಿಡಿದ ಸೀತೆ ಭ್ರಾಂತಳಾಗಿ ಅನಾರೋಗ್ಯದಿಂದ ತೊಳಲುತ್ತಿರುವಾಗ ಅವಳಿಗೆ ದೆವ್ವ ಹಿಡಿದಿದೆ ಎಂದು ವೆಂಕಪ್ಪಜೋಯಿಸ ನರಕ ಶಿಕ್ಷೆಯನ್ನು ನೀಡುತ್ತಾನೆ. ಆ ಜೋಯಿಸರ ಸೂಚನೆ ಯಂತೆ ಚಂದ್ರಯ್ಯಗೌಡರು ಒಂದು ಕಬ್ಬಿಣದ ಬರೆಗುಳವನ್ನು ಕೆಂಪಗೆ ಕಾಯಿಸಿ ಅವಳ ಸಂಪಿಗೆ ತೋಳಿನ ಮೇಲೆ ಬರೆ ಹಾಕುತ್ತಾರೆ. ಸೀತೆ ಈ ನರಕದ ಶಿಕ್ಷೆಯಿಂದ ಪಾರಗಲು ಯೋಚಿಸುತ್ತಾಳೆ. ಆಗ ಓಬಯ್ಯ ಮತ್ತು ಪುಟ್ಟ ಅಲ್ಲೇ ನಿಂತಿದ್ದರು. ಪುಟ್ಟ ಸೀತೆಯ ಸ್ಥಿತಿಯನ್ನು ಕಂಡು ಬಿಕ್ಕಿ ಬಿಕ್ಕಿ ಅಳತೊ

ಡಗುವನು. ನಂತರ ಪುಟ್ಟನೇ ಸೀತಮ್ಮನ ಬರೆ ತೋಳಿನ ಗಾಯದ ಮೇಲೆ ತೆಂಗಿನ ಎಣ್ಣೆಯನ್ನು ಹಚ್ಚಿ ಆರೈಕೆ ಮಾಡಿದನು. ಸ್ವಲ್ಪ ಹೊತ್ತಾದ ಮೇಲೆ ಸೀತೆ ಪುಟ್ಟನನ್ನು ಎಬ್ಬಿಸಿ ತನ್ನನ್ನು ಕೆಳಕಾನೂರಿನ ಹೂವಯ್ಯನ ಮನೆಗೆ ಸೇರಿಸುವಂತೆ ಕೇಳಿಕೊಳ್ಳುತ್ತಾಳೆ. ಪುಟ್ಟನಿಗೆ ನಿಜವಾಗಿಯೂ ಹೆದರಿಕೆ ಇದ್ದರೂ ಸೀತಮ್ಮನಿಗೋಸ್ಕರ ಎಲ್ಲ ಭಯ ಭೀತಿಗಳನ್ನು ಹಿಂದಕ್ಕೆ ಒತ್ತಿ ಆ ಮಳೆಯ ಕೆಸರಿನ ಕತ್ತಲೆಯಲ್ಲಿ ತಡವುತ್ತ ನಡೆದು ಸೀತೆಯನ್ನು ಹೂವಯ್ಯನ ಮನೆಗೆ ಸೇರಿಸುತ್ತಾನೆ. ಈ ಕಾರಣದಿಂದ ಸೀತೆಯ ಪ್ರಯತ್ನದಿಂದ ಪುಟ್ಟ ಮುಂದೆ ಅಕ್ಷರಸ್ಥನಾಗಿ ಕೆಳಕಾನೂರಿನ ಒಕ್ಕಲಾಗಿ ಸಣ್ಣ ಪುಟ್ಟಣ್ಣ ಎನಿಸಿಕೊಂಡು ಬದುಕುತ್ತಾನೆ.

## ಮುಕುಂದಯ್ಯ :

ಕೋಣೂರು ರಂಗಪ್ಪಗೌಡರ ತಮ್ಮ ಮುಕುಂದಯ್ಯ ಮಲೆಗಳಲ್ಲಿ ಮದುಮಗಳು ಕಾದಂಬರಿಯ ಮುಖ್ಯ ಪಾತ್ರಧಾರಿ. ಹೆಗ್ಗಡಿತಿಯ ಹೂವಯ್ಯ, ಮದುಮಗಳ ಮುಕುಂದಯ್ಯ ಇಬ್ಬರು ನಮಗೆ ನಾಯಕ ಪಾತ್ರಧಾರಿಗಳಂತೆ ಕಂಡು ಬರುತ್ತಾರೆ. ಆದರೆ ಮುಕುಂದಯ್ಯನಲ್ಲಿ ಹೂವಯ್ಯನಷ್ಟು ಸಂಸ್ಕಾರ, ಸಂಯಮ, ಭಾವಾನುರೂಪ ಕಂಡುಬರಲಾರವು.

ಕೋಣೂರು ಮುಕುಂದಯ್ಯ ದಾನಮ್ಮ ಹೆಗ್ಗಡಿತಿಯ ಮಗನಾಗಿದ್ದು ಹೊಸ ತಲೆಮಾರಿನ ಪ್ರತಿನಿಧಿಯಂತೆ ಈ ಕಥೆಯಲ್ಲಿ ಕುವೆಂಪು ಚಿತ್ರಿಸಿದ್ದಾರೆ. ತನ್ನ ಬಾಲ್ಯದ ಗೆಳತಿಯಾದ ಚಿನ್ನಮ್ಮನನ್ನು ಪಡೆಯಲು ಅಂದಿನ ಶಿಷ್ಟಾಚಾರದ ಸಂಪ್ರದಾಯ, ನೀತಿ, ನಿಯಮ ಕಟ್ಟುಪಾಡುಗಳನ್ನು ಉಲ್ಲಂಘಿಸುತ್ತಾನೆ. ಕೋಣೂರು ರಂಗಪ್ಪಗೌಡರ ವಿರೋಧವನ್ನು ಕಟ್ಟಿಕೊಳ್ಳುತ್ತಾನೆ. ಪುರೋಹಿತಶಾಹಿ ವರ್ಗ ಮತ್ತು ಕಿಲಿಸ್ತರ ಮತಾಂತರ ಮೌಢ್ಯತೆಯ ವಿರುದ್ಧ ಪ್ರತಿಭಟಿಸಿ ಗೆಲ್ಲುತ್ತಾನೆ. ತನ್ನ ಭಾವ ದೇವಯ್ಯನನ್ನು ಮತಾಂತರದಿಂದ ತಪ್ಪಿಸಿ, ತನ್ನ ಅಕ್ಕ ದೇವಮ್ಮನ ಬಾಳನ್ನು ಹಸನು ಮಾಡುತ್ತಾನೆ. ಮದುಮಗಳು ಕಾದಂಬರಿ ಉದ್ದಕ್ಕೂ ಮುಕುಂದಯ್ಯನ ಪಾತ್ರ ಆವರಿಸಿಕೊಂಡಿದೆ. ಗುತ್ತಿ-ತಿಮ್ಮಿ, ಐತ-ಪಿಂಚಲು ಇವರ ಪ್ರಣಯದಂತೆ ಮುಕುಂದಯ್ಯ-ಚಿನ್ನಮ್ಮರ ಪ್ರಣಯ ಸಹಜವಾದರೂ ಶಿಷ್ಟ ಸಮಾಜದ ನೈತಿಕ ಕಟ್ಟುಗಳಿಗೆ ಬದ್ಧವಾಗಿದ್ದರಿಂದ ಉಳಿದ ಜೋಡಿಗಳಿಗಿಂತ ಉತ್ತಮವೆನಿಸುತ್ತದೆ. ಮುಕುಂದಯ್ಯನ ಬಾಲ್ಯದ ನೆನೆಪುಗಳನ್ನು, ಕನಸುಗಳನ್ನು ಹೇಳುವುದರಲ್ಲಿ ಕುವೆಂಪುರವರಿಗೆ ಹೆಚ್ಚು ಬಾಯಾರಿಕೆಯಾದಂತೆ ತೋರುತ್ತದೆ. ಮುಕುಂದಯ್ಯನ ಒಡನಾಡಿ ಚಿನ್ನಮ್ಮನಿಗೂ ಬಾಲ್ಯತನದಿಂದಲೂ ಆತನೊಂದಿಗೆ ಒಡನಾಟವಿದೆ. ಅವರಿಬ್ಬರೂ ಜೊತೆ ಜೊತೆಯಾಗಿ ಆಟವಾಡುತ್ತಾ ಬೆಳೆದವರು. ಒಬ್ಬರನ್ನೊಬ್ಬರು ನೋಡಿದವರು. ಆಟವಾಡಿದವರು. ಅದರ ಮೆಲುಕುಗಳು ನಮಗೆ ಇಲ್ಲಿ ಕಾಣಿಸುತ್ತವೆ. ತನ್ನ ಓರಗೆಯ ಸಂಗಾತಿಗಳಲ್ಲಿ ದೊಡ್ಡವರೊಡನೆ ಒಂಟಿ ಎಂಬಂತೆ ಬೆಳೆಯುತ್ತಿದ್ದ ಚಿನ್ನಮ್ಮನಿಗೆ ಮುಕುಂದಯ್ಯ ಒಂದು

ಅಲಭ್ಯವೂ ಅಪೂರ್ವವೂ ಆದ ಅನರ್ಘ್ಯ ವಸ್ತುವಾಗಿ ಕಾಣತೊಡಗಿದನು. ಆದರೆ ನಿತ್ಯವೂ ನಾಲ್ಕಾರು ಒಡನಾಡಿಗಳೊಡನೆ ಐಗಳ ಮಠದಲ್ಲಿಯೋ ದನ ಮೇಯಿಸುವ ಹಕ್ಕಲಿನಲ್ಲಿಯೋ ಗದ್ದೆತೋಟ ಗಳಲ್ಲಿಯೋ ಕೆಲಸದ ಆಳುಗಳೊಡನೆ ಇರುತ್ತಿದ್ದ ಮುಕುಂದಯ್ಯನಿಗೆ ಚಿನ್ನಮ್ಮಳಲ್ಲಿ ಯಾವ ರೀತಿಯ ಕುತೂಹಲವಾಗಲಿ ಆಸಕ್ತಿಯಾಗಲಿ ಹುಟ್ಟುತ್ತಿರಲಿಲ್ಲ. ನೆಂಟರ ಮನೆಗೆ ಬಂದಾಗ ನೆಂಟರ ಮಕ್ಕಳೊಡನೆ ದಾಕ್ಷಿಣ್ಯದಿಂದ ವರ್ತಿಸುವಂತೆ ಮಾತ್ರ ನಡೆದುಕೊಂಡಿದ್ದನು.

ಹೀಗೆ ನೆಂಟರ ಮನೆಯಲ್ಲಿ ಒಮ್ಮೆ ತನ್ನ ಹಿಂಬಾಲಿಸಿ ಬಂದ ಚಿನ್ನಿಯನ್ನು ನೋಡಿದನು. ತನ್ನ ಬಾಯಲ್ಲಿದ್ದ ಕೊಬ್ಬರಿ ಬೆಲ್ಲವನ್ನು ತಿಂದು ಪೂರೈಸಿ ತುಟಿ ಮೂಗು ಗಲ್ಲಗಳಿಗೆ ಹಿಡಿದಿದ್ದನ್ನು ಒರೆಸಿ ಕೊಳ್ಳಲು ಪರಿಕಾರದ ಮುಂಭಾಗದ ತುದಿಯನ್ನು ಸ್ವಲ್ಪ ಹೆಚ್ಚಿಗೆಯೇ ಅಶ್ಲೀಲದ ಮಟ್ಟದವರೆಗೂ ಎತ್ತಿ ದಾಗ ತುಸು ಡೊಳ್ಳೇರಿದ್ದ ಹೊಟ್ಟೆಯನ್ನು ತೊಡೆಯನ್ನು ಕಂಡು ಮುಕುಂದಯ್ಯನು ಜಿಗುಪ್ಸೆಗೊಂಡು ಮುಖ ತಿರುಗಿಸಿ 'ಇಸ್ಸಿ ಎಂಥಾ ಹುಡುಗಿಯಪ್ಪ' ಎಂದುಕೊಂಡಿದ್ದನು. ತಾನು ಮನೆಯಲ್ಲಿಯೇ ಇರು ವಾಗ ಸೊಂಟದ ಉಡುದಾರಕ್ಕೆ ನೇತು ಕಟ್ಟಿದ್ದ ಲಂಗೋಟಿಯ ವಿನಃ ಬೆತ್ತಲೆಯಾಗಿರುತ್ತಿದ್ದುದನ್ನು ಅವನು ಅಶ್ಲೀಲವೆಂದು ಭಾವಿಸಿರಲಿಲ್ಲ. 'ಗಂಡು ಹುಡುಗರು' ಸಾಮಾನ್ಯವಾಗಿ ಇರುತ್ತಿದ್ದುದು ಹಾಗಲ್ಲವೇ ಎಂದು ತಾನೇ ಸಮಾಧಾನ ಪಟ್ಟುಕೊಳ್ಳುತ್ತಿದ್ದ. ಚಿನ್ನಿ ಅಲ್ಲಿ ಮೇಯುತ್ತಿದ್ದ ಕೋಳಿಗಳನ್ನು ಪರಿಚಯಿಸಲು ಹೋಗಿ ಭಾವನ ಗಮನವನ್ನು ಸಂಪೂರ್ಣವಾಗಿ ಸೆಳೆಯುವ ಉದ್ದೇಶದಿಂದ ಅವನ ಅಂಗಿಯ ತೋಳನ್ನು ಹಿಡಿದು ಎಳೆಯುತ್ತಿದ್ದಾಗ ಮುಕುಂದನಿಗೆ ದಾಕ್ಷಿಣ್ಯವೂ ಸಂಯಮವೂ ತಪ್ಪಿಹೋಗಿ 'ಅಂಗಿ ಎಳೀ ಬೇಡ್ವೆ' ಎಂದು ಬಿಡಿಸಿಕೊಂಡಿದ್ದನು. ಆ ಕಾಲಮಾನಕ್ಕೆ ಮುಕುಂದನ ಅಂಗಿ ಎಷ್ಟು ಮುಖ್ಯವಾ ಗಿತ್ತು ಎಂದರೆ ಅಷ್ಟು ಅಮೂಲ್ಯವಾಗಿತ್ತು. ಆದರೆ ವಾಸ್ತವವಾಗಿ ಅವನ ಅಂಗಿ ಹೊಸತಾಗಿರಲಿಲ್ಲ. ಸೊಗಸಿನದೂ ಆಗಿರಲಿಲ್ಲ. ಕಸೆಕಟ್ಟುವುದಕ್ಕೆ ಬದಲಾಗಿ ಗುಂಡಿ ಹಾಕಿತ್ತು ಅಷ್ಟೆ. ಅದರಲ್ಲಿ ಇರಬೇಕಾದ ಎಲ್ಲಾ ಗುಂಡಿಗಳು ಇರಲೂ ಇಲ್ಲ. ಆದ್ದರಿಂದ ಅವನು ಬಾಗಿದಾಗ ಮತ್ತು ಚಲಿಸಿದಾಗ ಅಂಗಿಗೂ ಮೈಗೂ ನಡುವೆ ಯಾವ ಉಡುಪೂ ಇಲ್ಲ ಎಂಬುದನ್ನು ನೇರವಾಗಿ ಘೋಷಿಸಿದಂತೆ ಹೊಟ್ಟೆಯ ಸಾಕ್ಷಾತ್ಕಾರ ಗೋಚರವಾಗುತ್ತಿತ್ತು. ಚಿನ್ನಿ ಮುಟ್ಟಿದ ಮಾತ್ರದಿಂದಲೇ ಮೈಲಿಗೆಯಾಗುವಷ್ಟು ಮಡಿಯು ಅದಕ್ಕಿರಲಿಲ್ಲ. ಅವನು ಉಟ್ಟಿದ್ದ ಅಡ್ಡ ಪಂಚೆ- ಅವನ ಮಣಕಾಲಿನ ಒಂದು ಅಂಗುಲ ಕೆಳಗಿತ್ತೋ ಏನೋ? ಅದನ್ನು ಅಡ್ಡ ಪಂಚೆಯನ್ನಾಗಿ ಸುತ್ತಿದ್ದರಿಂದ ಅದು ಆಯತಪ್ಪಿ ಆಗಾಗ ಆಕಳಿಸಿ ಬಾಯಿ ತೆರೆದಂತಾಗಿ ಅವನು ಒಳಗೆ ಕಟ್ಟಿದ್ದ ಕೌಪೀನವನ್ನು ಅದರ ಅಂತಸ್ಥ ಸಮೇತ ಸಂದೇಹಕ್ಕೆ ಆಸ್ಪದ ವಿಲ್ಲದಂತೆ ಪ್ರದರ್ಶಿಸಿತು. ಚಿನ್ನಿ ಪರಿಕಾರ ಎತ್ತಿದ್ದರಿಂದ ಏನೇನು ಅನಾಹುತವಾಯಿತೆಂದು ಮುಖ ತಿರುಗಿಸಿದ್ದನೋ ಅಂತಹ ಅನಾಹುತ ಇವನ ಪ್ರಯತ್ನವಿಲ್ಲದೆಯೇ ಆಗಾಗ ನಡೆದು ಹೋಗುತ್ತಿದ್ದುದನ್ನು

ಗಮನಿಸುವ ಪ್ರಜ್ಞೆ ಚಿನ್ನಿಗೆ ಇಲ್ಲವಾದ್ದರಿಂದ ಮುಕುಂದಯ್ಯ ತಾನು ಮರ್ಯಾದಸ್ಥ ಎಂದು ಭಾವಿಸಲು ಅನುಕೂಲವಾಗಿತ್ತು.

ಮುಕುಂದಯ್ಯ ಅನಾಸಕ್ತಿ ತೋರಿದರೂ ಚಿನ್ನಿಗೆ ಅವನಲ್ಲಿ ಆಸಕ್ತಿ ಹೆಚ್ಚುತ್ತಿತ್ತು. ಅವನು ಉದಾಸೀನನಾಗಿರುತ್ತಿದ್ದುದನ್ನು ಇವಳು ಗಮನಕ್ಕೆ ಸ್ವಲ್ಪವೂ ತೆಗೆದುಕೊಳ್ಳಲಾರದವಳಾಗಿದ್ದಳು. ಅವನ ತಿರಸ್ಕಾರದ ಮಾತುಗಳು, ಅಂಗ ಭಂಗಿಯನ್ನು ಇವಳು ಅವನ ಆದರದ ಚರ್ಯೆಗಳೆಂದು ತಿಳಿದು ನಡೆಯತೊಡಗಿದಳು. ಅವನು ಹೋದಲ್ಲಿ ಹೋದಳು. ನಿಂತಲ್ಲಿ ಕುಳಿತಲ್ಲಿ ಅವನ ಪಕ್ಕದಲ್ಲಿಯೇ ಮೈಮುಟ್ಟುವಂತೆ ಕುಳಿತಳು. ಅವನು ತುಸು ದೂರ ಸರಿದರೂ ಇವಳು ಹತ್ತಿರಕ್ಕೆ ಸರಿದಳು. ಕೊನೆಗೆ ಮುಕುಂದ ಬೆಪ್ಪು ಹುಡುಗಿ ಎಂದುಕೊಂಡು ಅವಳನ್ನು ಸಹಿಸಿಯೇ ಸೋಲಬೇಕಾಯಿತು. ಇದಾದ ನಂತರ ಮುಕುಂದಯ್ಯ ತನ್ನ ತಾಯಿಯೊಡನಾಗಲಿ ಅತ್ತಿಗೆಯೊಡನಾಗಲಿ ಅಪರೂಪವಾಗಿ ಅಕ್ಕನೊಡನೆಯಾಗಲಿ ಹೂವಳ್ಳಿಗೆ ಹೋಗಿ ಬರುತ್ತಿದ್ದನು. ಚಿನ್ನಮ್ಮ ಒಂದೊಂದು ಸಲ ಕೋಣೂರಿಗೆ ಬಂದಾಗ ಮುಕುಂದ ಭಾವನೊಡನೆ ಏನಾದರೂ ಹೊಸ ಅನುಭವದಲ್ಲಿ ಅಥವಾ ಹೊಸ ಸಾಹಸದಲ್ಲಿ ಭಾಗಿಯಾಗುತ್ತಿದ್ದಳು. ಅವಳು ಆ ಮನೆಗೂ ಸುತ್ತಣ ಸ್ಥಾನಗಳಿಗೂ ಮೊದಲನೆಯ ಬಾರಿ ಬಂದಾಗಲೇ ಪರಿಚಿತಳೆಂಬಂತೆ ಹೊಂದಿಕೊಂಡಿದ್ದಳು.

ಮೊದಮೊದಲು ಮುಕುಂದಯ್ಯ ಐಗಳ ಮಠದಲ್ಲಿ ತನ್ನೊಡನೆ ಕಲಿಯುತ್ತಿದ್ದ ಇತರ ಗಂಡು ಮಕ್ಕಳ ಮುಂದೆ ಚಿನ್ನಿಯನ್ನು ಆಟಕ್ಕೆ ಸೇರಿಸಿಕೊಳ್ಳಲು ಹಿಂಜರಿಯುತ್ತಿದ್ದನು. ಆದರೆ ಚಿನ್ನಿಯು ಮುಂದುವರೆದು ಅವನ ಲಜ್ಜೆ ದಾಕ್ಷಿಣ್ಯಗಳನ್ನೆಲ್ಲಾ ತೊಡೆದು ಹಾಕಿದ್ದಳು. ಬರುಬರುತ್ತಾ ಅವಳು ಹುಡುಗಿ ಎಂಬ ಬೇಧ ಭಾವಗಳನ್ನು ಮರೆತುಹೋದಂತೆ ವರ್ತಿಸಿ ದೊಡ್ಡವರಿಂದ ಬೈಸಿಕೊಂಡಿದ್ದನು.

ಒಮ್ಮೆ ಮನೆಗೆ ಸಮೀಪದಲ್ಲಿ ಹರಿಯುತ್ತಿದ್ದ ಕೋಡ್ಲುಹಳ್ಳದ ಗುಂಡಿಯಲ್ಲಿ ಒಂದು ಹಲಗೆ ತೆಪ್ಪ ಮಾಡಿ ಚಿನ್ನಿಯನ್ನು ಹತ್ತುವಂತೆ ಧೈರ್ಯ ಹೇಳಿ ಪ್ರೇರೇಪಿಸಿದ್ದನು. ಆದರೆ ಗಳುವಿನ ಹುಟ್ಟಿನಿಂದ ಹಲಗೆಯನ್ನು ದಡದಿಂದ ತಳ್ಳಿ ತುಸು ದೂರ ಹೋಗುವುದರೊಳಗಾಗಿ ಅದು ತಲೆಕೆಳಗಾಗಿತ್ತು. ಅಲ್ಲಿಯೇ ದನ ಬಿಟ್ಟುಕೊಂಡಿದ್ದ ಬೈರ ಓಡಿಬಂದು ನೀರಿಗಿಳಿದು ಆಗುತ್ತಿದ್ದ ಅನಾಹುತವನ್ನು ತಪ್ಪಿಸಿದ್ದನು.

ಆದರೆ ಚಿನ್ನಮ್ಮ ಪರಿಕಾರವೆಲ್ಲಾ ಒದ್ದೆಯಾಗಿ ಮೂಗಿಗೆ ನೀರು ನುಗ್ಗಲು, ಈಜಲು ಬರುತ್ತಿದ್ದ ಮುಕುಂದ ಮತ್ತು ಆತನ ಜೊತೆಗಾರರು ತಮ್ಮ ಬಟ್ಟೆಗಳನ್ನೆಲ್ಲಾ ದಡದ ಮೇಲಿಟ್ಟು ಕೌಪೀನಧಾರಿಗಳಾದ್ದರಿಂದ ಬಿಸಿಲಿನಲ್ಲಿ ಮೈ ಆರಿಸಿಕೊಂಡು ಬಟ್ಟೆ ಹಾಕಿಕೊಂಡರು. ಅವರು ಅಂತಹ ಅನಾಹುತದಲ್ಲಿ ಭಾಗಿಯಾಗಿದ್ದರೆಂದು ಯಾರು ಊಹಿಸುವಂತಿರಲಿಲ್ಲ. ಆದರೆ ಚಿನ್ನಮ್ಮನ ಅವಸ್ಥೆ ಧಾರುಣವಾಗಿತ್ತು.

ಪರಿಕಾರ ಬಿಚ್ಚಿ ಬಯಲಿಗೆ ಹರಡಿದರೆ ಬತ್ತಲೆ ಇರುವುದು ಹೇಗೆ? ಅವರೆಲ್ಲರೂ ಇರುವಾಗ! ಬಿಚ್ಚಿ ಹರಡಿದರೆ ಚಳಿಗೆ ಗಡಗಡ ನಡುಗಬೇಕಿತ್ತು. ಇನ್ನು ಶೀತಜ್ವರ ಬಂದು ದೊಡ್ಡ ಪುಕಾರಾಗುತ್ತಿತ್ತು. ಮನೆಗೆ ಓಡಿಹೋಗಿ ಬೇರೆ ಪರಿಕಾರ ತರಬಹುದಿತ್ತು. ಆದರೆ ಅವಿವೇಕ ಎಲ್ಲರಿಗೂ ತಿಳಿದು ದೊಡ್ಡ ರಂಪಾಟ ವಾಗುತ್ತದೆ ಎಂದು ಮುಕುಂದನೇ ಒಂದು ಉಪಾಯವನ್ನು ಕಂಡುಹಿಡಿದನು. ಎಲ್ಲಾ ಹುಡುಗರನ್ನು ಬೇರೆ ಕಡೆ ಕಳಿಸಿ ಬೈರನನ್ನು ಹಕ್ಕಲಿಗೆ ದನ ಹೊಡೆದುಕೊಂಡು ಹೋಗಲು ಹೇಳಿ ಬಿಸಿಲು ಚನ್ನಾಗಿ ಕಾಯುತ್ತಿದ್ದ ಒಂದು ದೊಡ್ಡ ಪೊದೆಯ ಹಿಂದಣ ಬಯಲು ಸ್ಥಳಕ್ಕೆ ಅವಳನ್ನು ಕರೆದೊಯ್ದು, ತಾನು ಅಲ್ಲಿ ಚಿನ್ನಮ್ಮನ ಮಾನಕ್ಕೆ ಅಪಚಾರವಾಗದಷ್ಟು ದೂರದಲ್ಲಿ ಮರೆಯಲ್ಲಿ ಇರುವುದಾಗಿ ಚಿನ್ನಮ್ಮ ಏಕಾಂತದಲ್ಲಿ ಪರಿಕಾರವನ್ನು ಬಿಚ್ಚಿ ಹಿಂಡಿ ಹರಡಿ ಚಳಿಯಾಗದಂತೆ ಬಿಸಿಲು ಕಾಯಿಸಿಕೊಳ್ಳಲು ಹೇಳಿದನು.

ಚಿನ್ನಮ್ಮ ಹಾಗೆಯೇ ಬಿಸಿಲು ಕಾಯಿಸುತ್ತಿದ್ದಾಗ ಕಾಡೆಲ್ಲಾ ನಿಶಬ್ದವಾಗಿ ಭಯಾನಕವಾದಂತೆ ತೋರಿತು. ಮುಕುಂದ ಭಾವ ಎಲ್ಲಿಯಾದರೂ ಹೋಗಿಬಿಟ್ಟರೆ ಎಂದುಕೊಂಡು ಬಾವಾ ಎಂದು ಮೆಲ್ಲನೆ ಕರೆದಾಗ 'ಇಲ್ಲೆ ಇದ್ದಿನಿ ಬಟ್ಟೆ ಆರ್ತೆನು ಹಾಕಿಕೊಂಡೆಯಾ' ಎಂದು ಮುಕುಂದ ಕೇಳುತ್ತಾನೆ. ಇಲ್ಲ ನೀನು ಇದ್ದಿಯೋ ಇಲ್ಲೊ ಅಂತ ಕರೆದೆ ಎಂದಳು. ಮತ್ತೊಮ್ಮೆ ಆಕೆಗೆ ಪೊದೆಯೊಳಗೆ ಏನೋ ಹರಿದಂತಾಗಿ ದಿಗಿಲಾಗಿ ಭಯದಿಂದ ಮುಕುಂದನನ್ನು ಕರೆದೆ ಬಿಡುತ್ತಾಳೆ. ಮುಕುಂದ ಪರಿಕಾರ ಒಣಗಿ ಅದನ್ನು ಹಾಕಿಕೊಂಡೆ ಚಿನ್ನಿ ಕರೆಯುತ್ತಿದ್ದಾಳೆಂದು ತುಸು ದಿಗ್ಗನೆ ಓಡಿಯೇ ಬಂದನು.

ನೋಡುತ್ತಾನೆ ಚಿನ್ನಿ ಬತ್ತಲೆ ನಿಂತಿದ್ದಾಳೆ! ಕಡೆಗೆ ಕುಳಿತೂ ಇಲ್ಲ ಅವನಿಗೆ ತುಂಬಾ ಅವಮಾನ ವಾದಂತಾಗಿ ಮುಖ ತಿರುಗಿಸಿಕೊಂಡು ನಿಂತು 'ಯಾಕೆ ಕರೆದದ್ದು ಪರಿಕಾರ ಒಣಗಾಕೆ ಮುಂಚೆ' ಎಂದು ಸಿಡುಕಿದನು. ಆಗ ಚಿನ್ನಮ್ಮ ಬಿಡಿಬಿಡಿ ಅಕ್ಷರದಲ್ಲಿ ನಿಡುಸ್ವರದಿಂದ ನಾಚುವ ಭಂಗಿಯಲ್ಲಿ ಹೇಳಿದಳು. 'ಎಂತದೋ ಸರಸರ ಅಂತು. ಮಟ್ಟಿನಲ್ಲಿ ನಂಗೆ ಹೆದರಿಕೆ ಆಗ್ತದೆ. ಅದಕ್ಕೆ ಕರೆದೆ. ನಿಮ್ಮನ್ನು ಬನ್ನಿ ಅಂತ ಯಾರು ಹೇಳ್ದೊರು?'[೧೦] ಎಂದು ಬಹುವಚನಯುಕ್ತವಾಗಿ ಮಾತಾಡಿದಳು.

ಮುಕುಂದಯ್ಯ ದೊಡ್ಡವನಾದಂತೆಲ್ಲಾ ಇವರ ಸಹವಾಸ ಸ್ವರೂಪಗಳು ಬದಲಾಯಿಸಿದ್ದವು. ಹಕ್ಕಿಗೂಡು ಕಂಡುಹಿಡಿಯುವುದು, ಜೇನು ಕೀಳುವುದು, ಗಾಳಹಾಕಿ ಮೀನು ಹಿಡಿಯುವುದು, ಹೊಂಡ ತೋಣಕುವುದು, ಸಬೆ ಒಡ್ಡಿ ಕಾಡು ಕೋಳಿ, ಚಿಟ್ಟುಕೋಳಿ ಹಿಡಿಯುವುದು ಇತ್ಯಾದಿಗಳು ಅವನ ಹವ್ಯಾಸ ವಾಗಿ ಹೋದವು. ಅವನ ಮೋರೆಯ ಮೇಲೆ ಅದರಲ್ಲಿಯೂ ತುಟಿಯ ಮೇಲ್ಬಾಗದಲ್ಲಿ ತುಪ್ಪಳು ಗೂದಲು ಗರಿಗಳು ಕರಿಯಗೆರೆಗಳು ಮೂಡತೊಡಗಿದ್ದವು. ಆತ ದಿನೇ ದಿನೇ ಚಿನ್ನಿಗೆ ಮಾನಸಿಕವಾಗಿ ಹತ್ತಿರವಾಗತೊಡಗಿದನು. ಆಗೊಮ್ಮೆ ಈಗೊಮ್ಮೆ ಚಿನ್ನಿಯನ್ನು ಸಂಧಿಸಿದಾಗ ಬಾಯಿಂದಾಡಿ ಹೇಳಬಾರದ

ಮತ್ತು ಅವರಿದ್ದ ಸಮಾಜದ ಪರಿಸ್ಥಿತಿಯಲ್ಲಿ ಎಂದೂ ಹೇಳಬಾರದ ಪ್ರಣಯ ಸಂವಾದ ನಡೆದು ಹೋಗುತ್ತಿತ್ತು. ಒಂದೆರಡು ಸಾರಿ ಮುಕುಂದಯ್ಯ ಏನನ್ನೋ ಹೇಳಬೇಕೆಂದು ಬಾಯೆತ್ತಿ ತುಟಿ ನಡುಗಿ ಇದ್ದಕ್ಕಿದ್ದಂತೆ ಮಾತು ತೊದಲಿ ಬೇರೆ ಏನನ್ನೋ ಮಾತಾಡಿ ಮುಗಿಸುತ್ತಿದ್ದನು. ಹೀಗೆಯೇ ಮುಕುಂದಯ್ಯನ ಪ್ರೇಮ ಬಾಲ್ಯದಿಂದಲೂ ಹರಿದು ಒಂದಾಗಿತ್ತು.

## ಚಿನ್ನಮ್ಮ :

ಚಿನ್ನಮ್ಮ ಹೂವಳ್ಳಿಯ ವೆಂಕಪ್ಪನಾಯಕರ ಮಗಳು. ಈಕೆ ಮುಕುಂದಯ್ಯನ ಬಾಲ್ಯದ ಪ್ರೀತಿಯ ಗೆಳತಿ. ತಾಯಿ ಇಲ್ಲದ ಮಗುವಾಗಿ ಚಿನ್ನಮ್ಮ ಅಜ್ಜಿಯ ಆಶ್ರಯದಲ್ಲಿ ಬೆಳೆದಳು. ಜೀವನದಲ್ಲಿ ಮುಕುಂದಯ್ಯನನ್ನೇ ಪಡೆಯಬೇಕೆಂದು ಸರ್ವಸಿದ್ದಳಾದವಳು. ಈ ಹಂಬಲಿಕೆಯ ಪೂರೈಕೆಗಾಗಿ ಸಂಪ್ರದಾಯವನ್ನು ವಿರೋಧಿಸಿ ನಡೆಯುವ ಹೆಣ್ಣಾಗಿ ಚಿನ್ನಮ್ಮ ಕಂಡುಬರುತ್ತಾಳೆ. ಸುಕೋಮಲೆಯಾದ ಚಿನ್ನಮ್ಮ ತನ್ನ ಬದುಕಿನ ನಿರ್ಣಾಯಕ ಘಟ್ಟದಲ್ಲಿ ಮಾಡುವ ಸಾಹಸ ಆಕೆಯ ದಿಟ್ಟತನವನ್ನು ಪ್ರದರ್ಶಿಸುತ್ತದೆ. ಕಾನೂರು ಹೆಗ್ಗಡಿತಿಯ ಸೀತೆಗೆ ಹೋಲಿಸಿದರೆ ಅವಳಿಗಿಂತ ಪಕ್ವವೂ ದಿಟ್ಟನಿಲುವೂ ಧೈರ್ಯಗಾರಿಕೆಯೂ ಚಿನ್ನಮ್ಮನಲ್ಲಿ ಕಾಣಬರುತ್ತದೆ. ಬದಲಾಗುತ್ತಿರುವ ಕಾಲಘಟ್ಟದಲ್ಲಿ ಸಾಮಾಜಿಕ ಧೋರಣೆಗಳು ಸ್ತ್ರೀಯರ ಸ್ಥಾನಮಾನವನ್ನು ಪರಿವರ್ತಿಸಿದುದರ ಸಂಕೇತದಂತೆ ಚಿನ್ನಮ್ಮ ಕಂಡು ಬರುತ್ತಾಳೆ. ಶಿಷ್ಟ ಸಮಾಜದಲ್ಲಿ ಜನಿಸಿದರೂ ಪ್ರಣಯಕ್ಕೆ ಸಹಜವಾಗಿ ಸ್ಪಂದಿಸುವ ಚಿನ್ನಮ್ಮ ಶಿಷ್ಟ ಸಮಾಜವನ್ನು ಮೌನವಾಗಿಯೇ ಮೆಟ್ಟಿ ನಿಲ್ಲುತ್ತಾಳೆ.

ಹೂವಳ್ಳಿ ವೆಂಕಣ್ಣನನ್ನು ಮದುವೆಯಾದ ಚಿನ್ನಮ್ಮನ ತಾಯಿ ವರುಷಕ್ಕೆ ಒಂದರಂತೆ ಮಕ್ಕಳನ್ನು ಹೆತ್ತು ಐದನೆಯ ಹೆರಿಗೆಯಲ್ಲಿ ತೀರಿಕೊಂಡಳು. ಮೊದಲನೇ ಮಗು ಚಿನ್ನಮ್ಮ ವಿನಾಃ ಉಳಿದೆಲ್ಲಾ ಮಕ್ಕಳು ಸತ್ತು ಹೋಗಿದ್ದವು. ಚಿನ್ನಮ್ಮ ತನ್ನ ತಾಯಿಯ ಚೆಲುವನ್ನೆಲ್ಲಾ ಪಡೆದು ಹುಟ್ಟಿದ್ದಳು. ಆದರೆ ಸುತ್ತೆಲ್ಲಿಯೂ ಅದನ್ನು ಗಮನಿಸುವ ಪ್ರಜ್ಞೆಯೇ ಇರಲಿಲ್ಲವಾದ್ದರಿಂದ ಅವಳು ಕಾಡು ಕಾಡಾಗಿ ಕೊಳಕು ಕೊಳಕಾಗಿ ಮಣ್ಣು ಹಿಡಿದು ಕಾಂತಿ ಕುಂದಿದ ಚಿನ್ನದ ಸಲಾಕೆಯಂತಿದ್ದಳು. ಅವಳ ಅಜ್ಜಿ ಅವಳನ್ನು ಸ್ವಲ್ಪಕಾಲ ತನ್ನ ಮನೆಗೆ ಕರೆದೋಯ್ದು ಲಾಲನೆ-ಪಾಲನೆ ಮಾಡಿದ್ದಳು. ಮೂರು ಹೊತ್ತು ಸುರಿಯುತ್ತಿದ್ದ ಸಿಂಬಳಕ್ಕೆ ಮದ್ದು ಕೊಡಿಸಿದ್ದಳು. ಜಡ್ಡು ಹಿಡಿದು ಕೆದರಿದ್ದ ಕೂದಲನ್ನು ಮೀಯಿಸಿ ಎಣ್ಣೆ ಕಾಣಿಸಿ ಸರಿ ಮಾಡಿಸಿದ್ದಳು. ಚಳಿಜ್ವರದಿಂದ ಗಡ್ಡೆ ಬೆಳೆದು ಡೊಳ್ಳುಗೊಂಡು ಮಿರುಗುತ್ತಿದ್ದ ಹೊಟ್ಟೆ ಜಕ್ಕುವಂತೆ ಮಾಡಿ ಬತ್ತಲೆಯನ್ನು ಪರಿಕಾರದಿಂದ ಮುಚ್ಚಿದ್ದಳು. ಕುಡಿವ ಹಾಲಿನಿಂದ ಹಿಡಿದು ಹೊರಳಾಡುತ್ತಿದ್ದ ಮಣ್ಣಿನವರೆಗೆ ಜೊಲ್ಲು ಅಂಟಾಗಿ ನಾರುತ್ತಿದ್ದ ದಿಷ್ಟಿಮಣಿಯನ್ನು ಶುಚಿಗೊಳಿಸಿ ಹಾಕಿದ್ದಳು. ನಂತರ ವೆಂಕಣ್ಣನ ದಿಸೆಯಿಂದಲ್ಲದೆ ಚಿನ್ನಮ್ಮನಿಗಾಗಿ ಅಜ್ಜಿ ಹೂವಳ್ಳಿಗೆ ಬಂದು ನೆಲೆಸಿದ್ದಳು.

ಅಜ್ಜಿಯ ಆರೈಕೆಯಿಂದ ಚಿನ್ನಮ್ಮ ಹುಲುಸಾಗಿ ಬೆಳೆದಳು. ಆದರೆ ತನ್ನ ಸುತ್ತ ಮುತ್ತಲಿದ್ದ ಇತರ ಹಳ್ಳಿಯ ಹುಡುಗಿಯರಂತೆ ನಯ ನಾಜೂಕುಗಳಿಂದ ದೂರವಾಗಿ ಒರಟಾಗಿಯೇ ದೊಡ್ಡವಳಾಗಿದ್ದಳು. ಅಜ್ಜಿಗೆ ಮನೆಗೆಲಸದಲ್ಲಿ ನೆರವಾಗುವುದರಿಂದ ಹಿಡಿದು ಕೊಟ್ಟಿಗೆಯಿಂದ ದನ ಬಿಟ್ಟುಕೊಂಡು ಹೋಗಿ ಹಕ್ಕಲು ಬಯಲಿನಲ್ಲಿ ಗುಡ್ಡಗಾಡಿನ ಓರೆಯಲ್ಲಿ ಮೇಯಿಸುವವರೆಗೂ ಅವಳ ಕಾರ್ಯಭಾರ ವ್ಯಾಪಿಸಿತ್ತು. ಹೂವಳ್ಳಿಗೆ ಒಂದೆರಡು ಮೈಲಿ ದೂರದಲ್ಲಿ ಐಗಳ ಮಠ ಇದ್ದರೂ ಹೆಣ್ಣು ಮಕ್ಕಳಿಗೆ ಓದು ಕಲಿಸುವುದು ಗಂಡು ಹುಡುಗರು ಸೀರೆಯುಡುವುದಕ್ಕಿಂತ ಹಾಸ್ಯಾಸ್ಪದವಾಗಿತ್ತು. ಒಮ್ಮೆ ಕೋಣೂರಿನ ಹುಡುಗ ಮುಕುಂದಯ್ಯ ವೆಂಕಟಮಾವನಿಗೆ 'ಚಿನ್ನಿನ ನಮ್ಮನೆಗೆ ಬರಿಯೋಕೆ ಕಳ್ಸಿ' ಎಂದು ಯಾವುದೋ ಮಾತಿನ ಸಂದರ್ಭದಲ್ಲಿ ಹೇಳಿದಾಗ, ಹೂವಳ್ಳಿ ವೆಂಕಣ್ಣ ನಕ್ಕು 'ಹೌದು ಕಣ್ರೋ ಅವಳಿನ್ನು ಬರಾವು ಕಲ್ತು ಮಣೆಗಾರಿಕೆ ಮಾಡೋದೊಂದೆ ಬಾಕಿ'[11] ಎಂದು ಲೇವಡಿ ಮಾಡಿದ್ದನು.

ಮೊಮ್ಮಗಳು ಚಿನ್ನಮ್ಮನನ್ನು ಕರೆದುಕೊಂಡು ಅಜ್ಜಿ ತನ್ನ ಮನೆ ಬಿಟ್ಟು ಹೂವಳ್ಳಿಯಲ್ಲಿ ನೆಲೆಸುವುದಕ್ಕೆ ಬಂದ ಹೊಸದರಲ್ಲಿ ಬಾಂಧವ್ಯದ ಸಂಪ್ರದಾಯದಂತೆ ಅವರನ್ನು ಮಾತನಾಡಿಸುವುದಕ್ಕಾಗಿ ಕೋಣೂರಿನ ಕಾಗಿನಹಳ್ಳಿ ಅಮ್ಮ (ದಾನಮ್ಮ ಹೆಗ್ಗಡಿತಿ) ತನ್ನ ಕಿರಿಯ ಮಗ ಮುಕುಂದನೊಡನೆ ಹೂವಳ್ಳಿಗೆ ಹೋಗಿದ್ದರು. ಆಗ ಆರು ವರುಷದ ಹುಡುಗಿಯಾಗಿದ್ದ ಚಿನ್ನಮ್ಮನನ್ನು ಹತ್ತಿರ ಕರೆದು ತಾನು ತಂದಿದ್ದ ಕೊಬ್ಬರಿ ಬೆಲ್ಲಗಳನ್ನು ನೀಡಿ ಪಕ್ಕದಲ್ಲಿಯೇ ಮಗನನ್ನು ತೋರಿಸಿ ಇವರು ಯಾರು? ಹೇಳು ನೋಡೋಣ? ಎಂದಾಗ ಅವಳು ಒಂದು ರೀತಿಯ ನಾಚಿಕೆಯನ್ನು ವ್ಯಕ್ತಪಡಿಸಿ 'ಅವರು' ಎಂದಿದ್ದಳು. ಅಜ್ಜಿ ಮತ್ತು ದಾನಮ್ಮ ಎಷ್ಟೆ ಪ್ರಯತ್ನಿಸಿದರೂ ಮುಕುಂದನ ಹೆಸರು ಹೇಳಲು ಆಗಲಿಲ್ಲ. ಆಗ ಚಿನ್ನಿ ಮುಕುಂದಯ್ಯನನ್ನು ನೋಡತೊಡಗಿದಳು. ಆ ಮಕ್ಕಳಿಬ್ಬರ ಕಣ್ಣುಗಳು ಸಂಧಿಸಿದೊಡನೆಯೇ ಒಂದು ಕ್ಷಣದಲ್ಲಿ ಒಂದು ಅತೀಂದ್ರಿಯ ವ್ಯಾಪಾರ ನಡೆದಿತ್ತು. ಚಿಕ್ಕ ಮಗು ಚಿನ್ನಮ್ಮ ಹುಡುಗ ಮುಕುಂದಯ್ಯನಲ್ಲಿ ತನ್ನ ಹಿಂದಿನ ಜನ್ಮದ ಗಂಡನನ್ನು ಕಂಡಿದ್ದಳು. ಆ ಅನುಭವ ನೆನಪಿನ ರೂಪದ್ದಾಗಿಯೂ ಇರಲಿಲ್ಲ. ಅದೊಂದು ಕಾಣುವಿಕೆಯಾಗಿತ್ತು. ಆ ಒಂದು ದರ್ಶನದಲ್ಲಿ ಚಿನ್ನಮ್ಮ ತಾನೂ ಮುಕುಂದಯ್ಯನೂ ತಮ್ಮ ಹಿಂದಣ ಜನ್ಮದಲ್ಲಿ ದಂಪತಿಗಳಾಗಿದ್ದುದನ್ನು 'ಆಗಿ' ಅನುಭವಿಸಿ ಕಂಡಿದ್ದಳು. ಅವಳು ಆಲೋಚಿಸಿ ಹೇಳಿರಲಿಲ್ಲ. ನೆನೆದೂ ಹೇಳಿರಲಿಲ್ಲ. ಅಪರೋಕ್ಷವಾಗಿ ಆಗ 'ಅವರು' ಎಂದು ಉತ್ತರವಾಗಿ ಹೇಳಿದ್ದಳು. ಕೊನೆಗೆ ಅಜ್ಜಿ ಹೇಳಿದ ಮಾತನ್ನು ಅನುಕರಿಸಿ 'ಭಾವ' ಎಂದಿದ್ದಳು. ನಂತರವಾಗಿ ಚಿನ್ನಮ್ಮ ಮುಕುಂದಯ್ಯನೊಡನೆ ಹೆಚ್ಚು ಹೆಚ್ಚಾಗಿ ಬೆರೆಯತೊಡಗಿದಳು. ಅವನು ಪ್ರತಿರೋಧವನ್ನು ವ್ಯಕ್ತಪಡಿಸಿದರೂ ಅದು ಅವಳಿಗೆ ಇಷ್ಟವಾಗಿಯೇ ಇತ್ತು. ಭಾವನನ್ನು ಮುಟ್ಟಿ ಮಾತನಾಡಿಸುವ, ಅಂಗಿ ಎಳೆಯುವ ಹಂತಕ್ಕೆ ಅವಳ ಒಡನಾಟ ಮುಂದುವರಿದಿತ್ತು. ಮತ್ತದು ಬಾಲ್ಯ ಸಹಜವಾಗಿತ್ತು. ಆ ದಿನ ರಾತ್ರಿ ಚಿನ್ನಮ್ಮ ಹಟ ತೊಟ್ಟು ತನ್ನ ಅಜ್ಜಿಗೂ ಕಾಗಿನಹಳ್ಳಿ ಅಮ್ಮನಿಗೂ ನಡುವೆ ಮುಕುಂದಯ್ಯನ ಒತ್ತಿನಲ್ಲಿಯೇ ಮಲಗಿದಳು.

ಬೆಳಗಾದೊಡನೆಯೇ ತನಗಿಂತಲೂ ಮೊದಲೇ ಎದ್ದು ಹೋಗಿದ್ದ ಮುಕುಂದಯ್ಯನನ್ನು ನೆನೆದು ಅರಚಿ ಅಳತೊಡಗಿದಳು. ಮುಕುಂದಯ್ಯ ಅಮ್ಮನೊಡನೆ ಕೋಣೂರಿಗೆ ಹೊರಟು ನಿಂತಾಗ 'ನಾನು ಬತ್ತೀನಿ' ಎಂದು ಅತ್ತು ರಂಪ ಮಾಡಿದ್ದಳು. ಕಡೆಗೆ ಅಜ್ಜಿ ನಿಮ್ಮ ತಂದೆಗೆ ಹೇಳಿ ನಾಳೆ ಹೋಗೋಣಾ ಎಂದು ಹೇಳಿ ಸಮಾಧಾನ ಮಾಡಿದ್ದಳು. ಒಮ್ಮೆ ಅಜ್ಜಿ ಅಡಿಕೆ ಅಗಿಯುತ್ತಾ ಕೂತಾಗ ಚಿನ್ನಮ್ಮ ಅಜ್ಜೀ.. ಅಜ್ಜೀ.. ಮತ್ತೆ ಮತ್ತೆ ನನ್ನ ಯಾವಾಗ ಮದುವೆ ಮಾಡಿ ಕೊಡ್ತೀಯ ಎಂದು ಕೇಳುತ್ತಾಳೆ. ಅಂತೂ ಒಂದು ದಿನ ಮಧ್ಯಾಹ್ನ ಅಜ್ಜಿ ಮೊಮ್ಮಗಳಿಗೆ ಬಿಸಿಲು ಇಳಿದ ಮೇಲೆ ಕೋಣೂರಿಗೆ ಹೋಗೋಣವೆಂದು ಹೇಳಿದ ಮೇಲೆ ಚಿನ್ನಿಗಾದ ಸಂಭ್ರಮ ಹೇಳತೀರದು. ಅವಳ ಹೃದಯದ ಹಿಗ್ಗನ್ನು ಅಳೆಯುವವರಾರು? ಚಿನ್ನಮ್ಮ ಆತುರದಿಂದ ಆಗಾಗ್ಗೆ ಅಜ್ಜಿಯ ಬಳಿ ಹೋಗಿ ಬಿಸಿಲಿಳಿದಾಯ್ತು ಬಾ ಅಜ್ಜಿ ಹೋಗೋಣ ಎಂದು ಅವಸರಿಸುತ್ತಿದ್ದಳು. ಕೋಣೂರಿಗೆ ಹೋದಾಗ ಮುಕುಂದನೊಡನೆ ಕೋಡ್ಲು ಹಳ್ಳದ ನೀರಿನಲ್ಲಿ ಮುಳುಗಿ ಇಲ್ಲದ ರಂಪಾಟ ಸೃಷ್ಟಿಯಾಗಿತ್ತು. ಹೀಗೆ ಚಿನ್ನಮ್ಮ ಮತ್ತು ಮುಕುಂದಯ್ಯರ ಬಾಲ್ಯದ ಭಾವ ಬಾಂಧವ್ಯದ ಬೆಸುಗೆಯನ್ನು ಪಡೆಯುತ್ತದೆ.

## ಚೆಲುವಯ್ಯ :

ಕುವೆಂಪುರವರ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಬರುವ ಎಳೆಯ ಪಾತ್ರ ಚೆಲುವಯ್ಯನದು. ಬೆಟ್ಟಳ್ಳಿ ಕಲ್ಲಯ್ಯಗೌಡರ ಮಗ ದೇವಯ್ಯ ಮತ್ತು ದೇವಮ್ಮ ದಂಪತಿಗಳ ಮಗನಾಗಿ ಚೆಲುವಯ್ಯ ಎಂಬ ಈ ನವಶಿಸು ಜನಿಸುತ್ತದೆ. ಚೆಲುವಯ್ಯನ ಹುಟ್ಟು, ಬಾಲ್ಯ ಮತ್ತು ಆತನ ಆರೈಕೆಯನ್ನು ಕುವೆಂಪುರವರು ಸೊಗಸಾಗಿ ಚಿತ್ರಿಸಿದ್ದಾರೆ. ಇಲ್ಲಿನ ಮತ್ತೊಂದು ವಿಶೇಷವೇನೆಂದರೆ ಹಳೆಮನೆ ಸುಬ್ಬಣ್ಣ ಹೆಗ್ಗಡೆಯ ಮಗ ದೊಡ್ಡಣ್ಣ ಹೆಗ್ಗಡೆಯು ತಿರುಪತಿಗೆ ಹೋದವನು ಹಿಂತಿರುಗಿ ಬಾರದೆ ಮರಣ ಹೊಂದಿರುತ್ತಾನೆ. ಆತನೇ ಮುಂದಿನ ಜನ್ಮದಲ್ಲಿ ದೇವಮ್ಮನ ಹೊಟ್ಟೆಯಲ್ಲಿ ಶಿಶು ಚೆಲುವಯ್ಯನಾಗಿ ಜನಿಸಿದನೆಂದು ಪೂರ್ವಜನ್ಮದ ಕಥೆಯೊಂದು ಈ ಪಾತ್ರಕ್ಕೆ ಅಂಟಿಕೊಳ್ಳುತ್ತದೆ.

ಹಳೆಮನೆ ಸುಬ್ಬಣ್ಣ ಹೆಗ್ಗಡೆಯವರ ಹಿರಿಯ ಮಗ ದೊಡ್ಡಣ್ಣ ಹೆಗ್ಗಡೆ ತಿರುಪತಿಗೆ ಹೋದವ ಏಳೆಂಟು ವರ್ಷಗಳಾಗಿದ್ದರೂ ಹಿಂತಿರುಗಿ ಬಂದಿರುವುದಿಲ್ಲ. ಆತನ ಹೆಂಡತಿಯಾದ ರಂಗಮ್ಮ ತನ್ನ ಗಂಡನಿಗಾಗಿ ಪರಿತಪಿಸುತ್ತಾ ಒಂದು ರೀತಿಯ ಮನೋಕ್ಷೋಭೆಗೆ ಒಳಗಾಗಿರುತ್ತಾಳೆ. ಅಂತಹ ಸಮಯದಲ್ಲಿ ಮುಕುಂದಯ್ಯರಾದಿಯಾಗಿ ಎಲ್ಲರೂ ಕಲ್ಲೂರಿಗೆ ಸತ್ಯನಾರಾಯಣ ವ್ರತಕ್ಕೆ ಬಂದಿದ್ದಾಗ, ಅಲ್ಲಿ ದೇವಯ್ಯ ಮತ್ತು ಮುಕುಂದಯ್ಯರಿಗೆ ಸಿಕ್ಕಿದ ಆ ಸನ್ಯಾಸಿ ಗಡ್ಡದಯ್ಯ ಮುಕುಂದಯ್ಯನಿಗೆ ಎಲ್ಲಾ ವಿವರಗಳನ್ನು ಹೇಳುತ್ತಾನೆ.

ಮುಕುಂದಯ್ಯ ತನ್ನ ಹಳೆಮನೆ ದೊಡ್ಡಣ್ಣ ಹೆಗ್ಗಡೆಗೆ ಸಂಭವಿಸಿದ ದುಸ್ಥಿತಿಯನ್ನು ತಿಳಿಸಿ ಹೇಳಿದಾಗ, ಸನ್ಯಾಸಿಯು 'ಆತ ತಿರುಪತಿಯಲ್ಲಿ ಏಳೆಂಟು ವರ್ಷಗಳ ಹಿಂದೆಯೇ ಗತಿಸಿದ್ದಾನಲ್ಲ ಮತ್ತೇಕೆ ಅವನ ಚಿಂತೆ' ಎಂದು ಭೂತಜಾತದ ಸ್ಮರಣೆಯನ್ನು ಹೇಳುತ್ತಾನೆ. ಮುಕುಂದಯ್ಯ 'ಹಾಗೆಯೇ ಕೆಲವರು ಭಾವಿಸಿದ್ದರು ಆದರೆ ಅವರು ಬದುಕಿದ್ದು ಗೋಸಾಯಿಗಳ ಜೊತೆ ಇದ್ದರು. ಈ ತೀರ್ಥ ಹಳ್ಳಿಯಲ್ಲಿ ಪೋಲಿಸರ ವಶದಲ್ಲಿ ಇದ್ದಾರೆ. ವೈದ್ಯರು ನೋಡಿಕೊಳ್ಳುತ್ತಿದ್ದಾರೆ. ಅವರಿಗೆ ತಾನು ಯಾರು ಏನು ಎಂಬುದೆಲ್ಲಾ ಮರೆತು ಹೋಗಿದೆಯಂತೆ. ಮೊನ್ನೆ ಅವರನ್ನು ಚೆನ್ನಾಗಿ ತಿಳಿದಿದ್ದ ನಮ್ಮ ಒಬ್ಬರು ಐಗಳು ಅಲ್ಲಿಗೆ ಹೋಗಿ ಅವರನ್ನು ನೋಡಿಕೊಂಡು ಬಂದಿದ್ದಾರೆ. ನಮ್ಮ ಭಾವನೇ ಹೌದೆಂದು ಅನೇಕ ಚಿಹ್ನೆಗಳಿಂದ ಅವರು ಗುರುತಿಸಿದ್ದಾರೆ. ಹುಲಿಯಿಂದಾದ ಒಂದು ಗಾಯದ ಕಲೆಯಂತೂ ಚನ್ನಾಗಿ ಗುರುತು ಸಿಕ್ಕುತ್ತದೆಯಂತೆ. ಅಕ್ಕ ಏಳೆಂಟು ವರ್ಷಗಳಿಂದಲೂ ಕೊರಗುತ್ತಿದ್ದಾರೆ' ಎಂದು ಅಳಲನ್ನು ತೋಡಿ ಕೊಂಡಾಗ, ಆ ಸನ್ಯಾಸಿ ತನ್ನ ದಿವ್ಯವಾಣಿಯಿಂದ ಮುಕುಂದಯ್ಯನಿಗೆ ನಂಬಲಸದಳವಾದ ಮರ್ಮವೊಂದನ್ನು ತಿಳಿಸುತ್ತಾನೆ. ತೀರ್ಥಹಳ್ಳಿಯಲ್ಲಿ ಇರುವುದೇನೋ ನಿಮ್ಮ ಭಾವನಾಗಿದ್ದವರ ಶರೀ ರವೇ. ಆದರೆ ಅದರೊಳಗಿರುವುದು ಅವರ ಜೀವವಲ್ಲ. ಅವರ ಮರಣ ಸಮಯದಲ್ಲಿ ಅಲ್ಲಿಯೇ ಅಕಾಲ ಮೃತ್ಯುವಿಗೆ ತುತ್ತಾಗಿದ್ದ ಇನ್ನೂ ಕರ್ಮವಿರುವ ಒಬ್ಬ ಸನ್ಯಾಸಿಯ (ಬೈರಾಗಿಯ) ಜೀವ ಆ ದೇಹವನ್ನು ಆಕ್ರಮಿಸಿದೆ. ಇಂದೋ ನಾಳೆಯೋ ತನ್ನ ಪ್ರಾರಬ್ಧ ಮುಗಿದೊಡನೆಯೇ ಶರೀರವನ್ನು ತ್ಯಜಿಸುತ್ತದೆ. ತಿರುಪತಿಗೆ ಹೋಗಿದ್ದ ನಿಮ್ಮ ಭಾವ ಆ ನಿಮ್ಮ ಜೊತೆಯಲ್ಲಿ ಬಂದಿದ್ದ ಈಗ ತಾನೆ ಹೊರಟು ಹೋದರಲ್ಲ (ದೇವಯ್ಯ) ಅವರ ಮಗನಾಗಿ ಜನಿಸುತ್ತಾನೆ. ತಿರುಪತಿಯಲ್ಲಿ ತೀರಿಕೊಂಡ ನಿಮ್ಮ ಭಾವನ ಸಹಧರ್ಮಿಣಿ ನೀವು ಈ ಜನ್ಮದಲ್ಲಿ ಮದುವೆಯಾಗಬೇಕೆಂದಿರುವ ನಿಮ್ಮ ಪತ್ನಿಯಲ್ಲಿ ನಿಮ್ಮ ಮಗಳಾಗಿ ಹುಟ್ಟಿ ತನ್ನ ಹಿಂದಿನ ಜನ್ಮದ ಗಂಡನನ್ನೇ ಮದುವೆಯಾಗುತ್ತಾಳೆ. ಸನ್ಯಾಸಿ ಮತ್ತು ಮುಕುಂದಯ್ಯರ ಈ ಮಾತುಗಳು ಶಿಶು ಚೆಲುವಯ್ಯ ಜನಿಸಿದ ಕಾರಣೀಭೂತವನ್ನು ಅದರ ಹಿನ್ನೆಲೆ ಯನ್ನು ನಮಗೆ ಚೆನ್ನಾಗಿ ಪರಿಚಯಿಸುತ್ತವೆ.

ದೇವಮ್ಮ ತೊಟ್ಟಿಲಲ್ಲಿದ್ದ ಶಿಶುವನ್ನು ಜೋಗುಳ ಹಾಡಿ ಮಲಗಿಸುತ್ತಿದ್ದಳು. ಆಕೆ ಹೆರಿಗೆಯಾದ ಮೇಲೆ ತವರು ಮನೆಯಿಂದ ಬಂದು ಒಂದು ತಿಂಗಳಾಗಿತ್ತು. ಅದು ಅವಳ ಚೊಚ್ಚಲ ಹೆರಿಗೆ ಯಾಗಿದ್ದರೂ ಅವಳ ಶಿಶುಜನನ ಕಾಲದಲ್ಲಿ ತುಂಬ ಕಷ್ಟಪಡಬೇಕಾಗಿ ಬಂದುದರಿಂದ ಇನ್ನೂ ನಿಃಶಕ್ತಳಾಗಿಯೇ ಇದ್ದಳು. ತೊಟ್ಟಿಲಲ್ಲಿ ಮಲಗಿದ ಚೆಲುವಯ್ಯನಿಗೆ ಜೋಯಿಸರು ಜಾತಕ ಬರೆದು 'ಚ'ಕಾರದಿಂದ ಪ್ರಾರಂಭವಾಗತಕ್ಕದ್ದು ಎಂದು ಚಿನ್ನಪ್ಪ ಎಂದು ಸೂಚಿಸಿದ್ದರು. ಆದರೆ ಅದು ಸಿಂಧುವಳ್ಳಿ ಚಿನ್ನಪ್ಪನನ್ನು ನೆನಪಿಗೆ ತರುತ್ತದೆಂದು ಅದು ಅಮಂಗಳಕರವೆಂದು ನಿರ್ಣಯಿಸಿ, ಚೆಲುವಯ್ಯ ಎಂಬ

ಹೆಸರಿನಿಂದಲೇ ಕರೆಯ ತೊಡಗಿದರು. ಚೆಲುವಯ್ಯನ ಪಾತ್ರ ಚಿತ್ರಣದಲ್ಲಿ ಆ ಶಿಶುವಿನ ಆರೈಕೆ ಪಾಲನೆ ಪೋಷಣೆಯೇ ತುಂಬಿ ಹೋಗಿದೆ.

ಚೆಲುವಯ್ಯನನ್ನು ಎತ್ತಿ ಆಡಿಸುತ್ತಿದ್ದ ದೇವಮ್ಮನ ಬಳಿಗೆ ಒಮ್ಮೆ ಹುಚ್ಚು ಹೆಗ್ಗಡಿತಿಯಾದ ರಂಗಮ್ಮ ಬಂದಾಗ ಅಕ್ಕನ ಮುಂದೆ ಮಗುವನ್ನು ತೋರುತ್ತಾ, ನಿನ್ನ ದೊಡ್ಡಮ್ಮನ ನೋಡು. ಮಾತಾಡೋ ಏ ತುಂಟಾ ಎಂದಿದ್ದಳು. ಶಿಶುವಾದ ಚೆಲುವಯ್ಯ ತನ್ನ ದೊಡ್ಡಮ್ಮನನ್ನು ಕಣ್ಣರಳಿಸಿ ನೋಡುತ್ತಾ ಅವಳೇ ಎತ್ತಿಕೊಳ್ಳಲಿ ಎಂಬಂತೆ ತನ್ನ ಪುಟ್ಟ ಇನಿದೋಳುಗಳನ್ನು ಮುಂದಕ್ಕೆ ಚಾಚಿ ತನ್ನ ಅಮ್ಮನ ವಕ್ಷದಿಂದ ಚಿಮ್ಮತೊಡಗಲು, ರಂಗಮ್ಮ ಅಕ್ಕರೆಯುಕ್ಕಿ ಅವನನ್ನು ಎತ್ತಿಕೊಂಡು ತನ್ನ ಎದೆಗವುಚಿ ಕೆನ್ನೆಗೆ ಮೊಗವಿಟ್ಟು ಮುದ್ದಾಡಿದಳು. ಆ ಮಗುವಿನ ಸ್ಪರ್ಶದಿಂದ ರಂಗಮ್ಮ ಪ್ರಸನ್ನ ವ್ಯಕ್ತಿಯಾದಂತೆ ತೋರಿದಳು. ಅವಳಿ ಗಂಟಿದ್ದ ಹುಚ್ಚು ತತ್ಕಾಲಕ್ಕೆ ಬಿಟ್ಟುಹೋಗಿತ್ತು. ಚೆಲುವಯ್ಯನ ಆರೈಕೆಯಲ್ಲಿ ತಾನು ತೊಡಗಿದಳು. ಕೊನೆಗೆ ಆತನ ಪಾದಗಳನ್ನೇ ಬಿಗಿಯಾಗಿ ಹಿಡಿದು ಪ್ರಾಣ ಬಿಡುತ್ತಾಳೆ. ಚೆಲುವಯ್ಯ ಬೆಳೆದು ದೊಡ್ಡವನಾದ ಮೇಲೆ ಮುಕುಂದಯ್ಯ-ಚಿನ್ನಮ್ಮರ ಮಗಳನ್ನು ಮದುವೆಯಾಗಿ ಜೀವನ ನಡೆಸುತ್ತಾನೆ.

## ಧರ್ಮು :

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಮುಖ್ಯವಾದ ಶಿಶು ಪಾತ್ರವೆಂದರೆ ಈ ಧರ್ಮು. ಹೆಗ್ಗಡಿತಿಯ ವಾಸು ಮತ್ತು ಮದುಮಗಳ ಧರ್ಮುವಿನ ಪಾತ್ರಗಳಲ್ಲಿ ಒಂದು ರೀತಿಯ ಸಾಮ್ಯತೆ ತೋರುತ್ತದೆ. ಹೆಗ್ಗಡಿತಿಯ ವಾಸು ಹುಟ್ಟುತ್ತಲೇ ತಾಯಿಯನ್ನು ಕಳೆದುಕೊಂಡಿರುತ್ತಾನೆ. ಮದುಮಗಳ ಧರ್ಮು ತನ್ನ ತಂದೆಯನ್ನು ಕಳೆದುಕೊಂಡು ಹಪಹಪಿಸುತ್ತಾನೆ. ತಾಯಿಯ ಅನಾರೋಗ್ಯಕರವಾದ ಸ್ಥಿತಿಯನ್ನು ಕಂಡು ಮರುಗುತ್ತಾನೆ. ಕೊನೆಗೆ ತಾಯಿಯನ್ನು ಕಳೆದುಕೊಂಡು ತಬ್ಬಲಿಯಾಗುವ ದುರಂತ ಸನ್ನಿವೇಶವನ್ನು ಈ ಮಗು ಎದುರಿಸಬೇಕಾಗುತ್ತದೆ. ಇಡೀ ಕಾದಂಬರಿಯ ಓಟದಲ್ಲಿ ಈ ಧರ್ಮುವಿನ ಪಾತ್ರ ಸಂಕಟಪೂರಿತವಾಗಿದೆ.

ಧರ್ಮು ಹಳೆಮನೆ ದೊಡ್ಡಣ್ಣಹೆಗ್ಗಡೆ ಮತ್ತು ರಂಗಮ್ಮನವರ ಮಗ. ಆದರೂ ಕೋಣೂರು ಅಜ್ಜಿ ಮನೆಯಲ್ಲಿಯೇ (ಮುಕುಂದಯ್ಯನ ತಾಯಿ) ಇವನ ವಾಸ. ತನ್ನ ತಂದೆ ತಿರುಪತಿಗೆ ಹೋಗಿದ್ದು, ತೀರ್ಥಯಾತ್ರೆಯಿಂದ ಹಿಂತಿರುಗಿ ಬರದಿರುವುದು, ತಾಯಿಗೆ ಹುಚ್ಚು ಹಿಡಿದಿರುವುದು ಜನರೆಲ್ಲ ಆಕೆಯನ್ನು (ರಂಗಮ್ಮನನ್ನು) 'ಹುಚ್ಚು ಹೆಗ್ಗಡಿತಿ' ಎಂದು ಆಡಿಕೊಳ್ಳುವುದು, ತನ್ನ ಮನೆಯಲ್ಲಿ ಚಿಕ್ಕಪ್ಪ ತಿಮ್ಮಪ್ಪ ಹೆಗ್ಗಡೆ ಮುಂತಾದವರಿಂದ ನಿಂದನೆ ಇವೆಲ್ಲವನ್ನು ಕಂಡು ಧರ್ಮು ಜರ್ಜರಿತನಾಗುತ್ತಾನೆ.

ಕೋಣೂರಿನ ಐಗಳ ಮಠದಲ್ಲಿದ್ದುಕೊಂಡು ಓದುತ್ತಿದ್ದ ಹುಡುಗರಾದ ಧರ್ಮು, ಕಾಡು, ತಿಮ್ಮು ಮುಂತಾದ ಹುಡುಗರು ಐಗಳಿಲ್ಲದ ಸಮಯದಲ್ಲಿ ಲಗ್ಗೆಮಣೆ ಆಟ ಆಡಲು ಪ್ರಾರಂಭಿಸುತ್ತಾರೆ. ಲಗ್ಗೆ ಮಣೆ ಚೆಂಡನ್ನು ಹುಡುಕಿ ತಂದಾದ ಮೇಲೆ ಧರ್ಮುವಿನ ಸುಳಿವು ಕಾಣ ಸಿಗುವುದಿಲ್ಲ. ಆಗ ಮಕ್ಕಳೆಲ್ಲರೂ ಧರ್ಮುವಿನ ಸ್ಥಿತಿಯನ್ನು ತಮಗೆ ತಾವೇ ಹೇಳಿಕೊಂಡು ದುಃಖವನ್ನು ವ್ಯಕ್ತಪಡಿಸುತ್ತಾರೆ. ತಿಮ್ಮು ಹೇಳು ವಂತೆ ಧರ್ಮು ಒಂದೊಂದು ಸಲ ರಾತ್ರಿಯಲ್ಲಿ ಎಚ್ಚರವಾಗಿದ್ದು, ಮಲಗಿದ್ದಾಗ ಆಗಾಗ್ಗೆ ದಿಗ್ಗನೆದ್ದು ಅಪ್ಪ ನನ್ನು ಕನಸಿನಲ್ಲಿ ಕಂಡಂತೆ ಏನೇನೋ ಮಾತಾಡುತ್ತಿದ್ದು ಅಳುತ್ತಿದ್ದ. ಆದ್ದರಿಂದ ಅವನನ್ನು ನೋಡಿ ಕೊಳ್ಳಲು ಕೋಣೂರು ಮುಕುಂದ ಭಾವ ಧರ್ಮುವಿನ ಜೊತೆಯಲ್ಲಿಯೇ ಇರುತ್ತಿದ್ದರು.

ತಿಮ್ಮು ಹೇಳಿ ಮುಗಿಸುವುದನ್ನು ಕಾಯುತ್ತಿದ್ದ ಕಾಡು ತನ್ನ ಕಥೆಯನ್ನು ಶುರುಮಾಡುತ್ತಾನೆ. ತಾನು ರಂಗಮ್ಮನನ್ನು ಎಲ್ಲರೂ ಕರೆಯುವಂತೆ ಹುಚ್ಚು ಹೆಗ್ಗಡಿತಿ ಎಂದು ಕರೆದಿದ್ದಕ್ಕೆ ಅದನ್ನು ಕೇಳಿಸಿ ಕೊಂಡ ಧರ್ಮು ಬಿಕ್ಕಿ ಬಿಕ್ಕಿ ಅಳಲು ಸುರುಮಾಡಿದ್ದು, ನಂತರ ತಾನು ಕ್ಷಮೆ ಕೇಳಿದ್ದು ವಿವರಿಸುತ್ತಾನೆ. ನಂತರ ಲಗ್ಗೆ ಆಟ ಆಡಲು ಧರ್ಮುವನ್ನು ಹುಡುಕಿ ತರಲು ಎಲ್ಲರೂ ಹೊರಡುತ್ತಾರೆ. ಆದರೆ ಧರ್ಮು, ತಾನು ತನ್ನ ತಾಯಿಯನ್ನು ಕಾಣಲು ಮನೆಗೆ ಹೋಗಬೇಕೆಂದು ಬಯಸಿ, ಅದಕ್ಕೆ ಅತ್ತೆಯನ್ನು ಒಪ್ಪಿಸಲು ಆಕೆಯ ಹೆರಿಗೆ ಕೋಣೆಯೊಳಗೆ ಹೋಗಿ ಸೇರಿಕೊಂಡಿರುತ್ತಾನೆ. ನಂತರ ಗೆಳೆಯರ ಮನಸ್ಸು ನೋಯಿಸ ಬಾರದೆಂದು ನೆಪ ಮಾತ್ರಕ್ಕೆ ಲಗ್ಗೆಮಣೆ ಆಟಕ್ಕೆ ಸೇರಿದ್ದನು. ಅವನು ಆಟವಾಡುತ್ತಿದ್ದರೂ ಮನಸ್ಸೆಲ್ಲಾ ಅವ್ವನನ್ನು ನೆನೆಯುತ್ತಿತ್ತು. ಲಗ್ಗೆ ಮಣೆಗೆ ಗುರಿ ಇಡುವಾಗಲು ಈ ಸಾರಿ ಚೆಂಡು ಲಗ್ಗೆ ಮಣೆಗೆ ಗುರಿ ಬಿದ್ದು ಅದನ್ನು ಉರುಳಿಸಿದರೆ ಅಪ್ಪಯ್ಯ ಬಂದೇ ಬರುತ್ತಾನೆ ಎಂದು ಸಂಕಲ್ಪಿಸಿ ಗುರಿ ಇಟ್ಟನು. ಲಗ್ಗೆ ಮಣೆ ಉರುಳಿ ಬಿದ್ದು ಹುಡುಗರೆಲ್ಲಾ ಸಂತೋಷದಿಂದ ಕುಣಿದಾಡಿದಾಗ ಅವರ ಜೊತೆ ಧರ್ಮು ಕೂಡ ಸಂತೋಷದಿಂದ ಕುಣಿದಾಡಿದ್ದನು.ಏಕೆಂದರೆ ಅವನ ಊಹೆಯೇ ಬೇರೆಯಾಗಿತ್ತು.

ಅಜ್ಜಮ್ಮ, ಅತ್ತೆಮ್ಮ, ಮುಕುಂದ ಭಾವನಿಂದ ಬಿಳ್ಕೊಂಡು ಹಳೆಮನೆಗೆ ಹೊರಟ ಧರ್ಮು ದಾರಿಯಲ್ಲಿ ಐತನ ಸಂಗಡ ತನ್ನ ತಂದೆಯ ನೆನಪು, ಕುರುಹು, ಆತನ ಪೂರ್ವದ (ಬಾಲ್ಯದ) ಕಥೆ ಎಲ್ಲವನ್ನೂ ಕೇಳುತ್ತಾನೆ. ಐತ ಕಥೆ ಹೇಳಿ ಮುಗಿಸಿದ ನಂತರ ಧರ್ಮು ನಡೆಯುತ್ತಿದ್ದವನು ಇದ್ದಕ್ಕಿದ್ದ ಹಾಗೆ ನಿಂತು ತನ್ನ ಬಲಗೈ ತೋರುಬೆರಳು ಮತ್ತು ನಡುಬೆರಳನ್ನು ಮುಂದೆಮಾಡಿ 'ಐತಾ ದೇವರನ್ನು ನೆನೆದು ಇದರಲ್ಲಿ ಒಂದನ್ನು ಮುಟ್ಟೋ' ಎಂದನು. ಐತ ಮುಟ್ಟಲು ಕೈ ಎತ್ತಿದಾಗ ಕಣ್ಣುಬಿಟ್ಟುಕೊಂಡು ಮುಟ್ಟ ಬ್ಯಾಡ ಕಣ್ಣು ಮುಚ್ಚಿಕೊಂಡು ಮುಟ್ಟೊ ಎನ್ನುತ್ತಾನೆ. ಐತ ಕಣ್ಣನ್ನು ಮುಚ್ಚಿಕೊಂಡು ನಡುಬೆರಳನ್ನು ಮುಟ್ಟಿದಾಗ ಧರ್ಮು ಆನಂದೋನ್ಮತ್ತನಾಗಿ ಕುಣಿದಾಡಿದ್ದನು. 'ಬಂದೇ ಬರ್ತಾರೆ ಬಂದೇ ಬರ್ತಾರೆ ಕಣೋ ನನ್ನ ಅಪ್ಪಯ್ಯ. ಐಗಳು ಹೇಳಿದ್ದು ನಿಜಾನೇ ನಿಜಾನೇ ಮನಸ್ಸಿಟ್ಟು ಪ್ರಾರ್ಥನೆ ಮಾಡಿದರೆ ದೇವರು ಕೃಪೆ

ಮಾಡಿಯೇ ಮಾಡುತ್ತಾನೆ' ಅಂತ ಹೇಳಿದ್ದು. ಹಾಂಗೆ ಬೆರಳು ಮುಟ್ಟದೆ ಅಂತಾ ಸಂತೋಷದಿಂದ ಉಬ್ಬಿ ಹೋಗುತ್ತಾನೆ. ಐತನೊಂದಿಗೆ ಮನೆಗೆ ಹೋದಾಗ ಅಲ್ಲಿಯ ಪರಿಸ್ಥಿತಿಯೇ ಬೇರೆಯಾಗಿತ್ತು. ಚಿಕ್ಕಪ್ಪನಾದ ತಿಮ್ಮಪ್ಪ ಹೆಗಡೆ ಧರ್ಮುವನ್ನು ನೋಡಿ ಮೂದಲಿಸುತ್ತಾ 'ಓಹೋ ಸಣ್ಣ ಹೆಗ್ಗಡೆಯವರ ಸವಾರಿ ಬಂದು ಬಿಡ್ತಲ್ಲಾ' ಎನ್ನುತ್ತಾನೆ. ಮನೆಯೊಳಗೆ ಹೋದರೆ ಒಳಗೆ ತಾಯಿಯ ಸುಳಿವಿಲ್ಲ. ಹುಚ್ಚು ಹೆಗ್ಗಡಿತಿಯನ್ನು ತಿಮ್ಮಪ್ಪ ಒಂದು ಕೋಣೆಯಲ್ಲಿ ಕೂಡಿಹಾಕಿ ಬೀಗ ಹಾಕಿದ್ದಾನೆ. ಹಲವು ವರ್ಷಗಳಿಂದ ತನ್ನ ಅವ್ವನಿಗೆ ಬಂದೊದಗಿದ್ದ ಮಹಾವಿಪತ್ತನ್ನು, ದುಃಖವನ್ನು ಅನುಭವಿಸಿ ಅರಿತಿದ್ದ ಈ ಬಾಲಕನಿಗೆ ತನ್ನ ತಾಯಿಯ ಕ್ಷೇಮ ಸಮಾಚಾರದಲ್ಲಿ ಯಾವಾಗಲೂ ಅವನ ಕಲ್ಪನೆ ಭಯಂಕರವಾದ ಚಿತ್ರಗಳನ್ನು ತಂದೊಡ್ಡಿ ಕಣ್ಣಿನಿಂದ ಕೋಡಿ ಹರಿಯುವಂತೆ ಮಾಡುತ್ತಿತ್ತು. ಒಮ್ಮೊಮ್ಮೆ ನಿದ್ದೆಗಣ್ಣಲ್ಲಿ ತಾಯಿಯ ಸಹಾಯಕ್ಕೆ ಸೇವೆಗೆ ಅಥವಾ ಅವಳಿಗೊದಗಿದ್ದ ಯಾವುದೋ ಭಯಂಕರ ಅನಿಷ್ಟವನ್ನು ತಪ್ಪಿಸುವ ಸಲು ವಾಗಿಯೋ ಎದ್ದು ಓಡುತ್ತಲೂ ಇದ್ದನು. ಅದಕ್ಕಾಗಿಯೇ ಅವನು ಎಲ್ಲಿಯೇ ಮಲಗಲಿ ಯಾರಾದರೂ ದೊಡ್ಡವರು ಅವನ ಪಕ್ಕದಲ್ಲಿ ಮಲಗುತ್ತಿದ್ದುದು ಅಭ್ಯಾಸವಾಗಿ ಹೋಗಿತ್ತು. ಈ ತಾಯಿ ಮನೆಯಲ್ಲೆಲ್ಲೂ ಕಾಣುತ್ತಿಲ್ಲವಾದ ಕಾರಣ ಧರ್ಮುವಿನ ಕಲ್ಪನೆ ಹೆಚ್ಚಾಗಿ ಹುಚ್ಚಾಗಿ ಬೆಳೆಯತೊಡಗಿತು. ನನ್ನ ತಾಯಿ ಏನೋ ಆಗಿದ್ದಾಳೆ, ಏನೋ ಆಗಿಹೋಗಿದೆ ಬೆಂಕಿಹೊತ್ತಿಸಿಕೊಂಡು ಸತ್ತಳೋ! ಬಾವಿಗೆ ಹಾರಿದಳೋ! ನೇಣು ಹಾಕಿಕೊಂಡಳೋ! ವಿಷತಿಂದಳೋ! ಅಥವಾ ಅಪ್ಪಯ್ಯನನ್ನು ಹುಡುಕಿ ತರುತ್ತೇನೆಂದು ಒಬ್ಬಳೆ ಹೊರಟು ಬಿಟ್ಟಳೋ ಎಂದು ಅವನು ಮಂಜತ್ತೆ ಜೊತೆ ಅಳತೊಡಗಿದನು. ಕೊನೆಗೆ ಮಂಜತ್ತೆ ಅಳಬೇಡಾ ತಮ್ಮ ನಿಮ್ಮ ಕೋಣೆಲೇ ಅತ್ತಿಗಮ್ಮ ಇದ್ದಾರೆ. ಬಾ ಹೋಗೋಣ ಎಂದಾಗ ಅವನಿಗೆ ಹೋದ ಜೀವ ಬಂದ ಹಾಗಾಯಿತು.

ಧರ್ಮುವಿನ ತಂದೆ ದೊಡ್ಡಣ್ಣಹೆಗ್ಗಡೆಯವರು ರಂಗಮ್ಮನನ್ನು ಕೈಹಿಡಿದು ಜೀವನ ಸಾಗಿಸುತ್ತಿದ್ದಾಗ ಧರ್ಮುವನ್ನು ಗರ್ಭದಲ್ಲಿ ಧರಿಸಿದ ರಂಗಮ್ಮ ದೀರ್ಘಕಾಲ ರೋಗಕ್ಕೆ ತುತ್ತಾಗಿ ಅಸ್ವಸ್ಥೆಯಾದಳು. ಆವಾಗಿನ ಪದ್ಧತಿಯಂತೆ ದೇವರು ಕೇಳಿಸುವುದು, ಗಣ ಬರಿಸುವುದು, ಹರಕೆ ಕಟ್ಟುವುದು, ಕಣ್ಣಾ ಪಂಡಿತರ ಗಿಡ ಮೂಲಿಕೆ, ದೈಯ್ಯಗಳಿಗೆ ಬಲಿ(ಆಹಾರ)ಕೊಡುವುದು ಏನೆಲ್ಲಾ ಮಾಡಿದರೂ ಪರಿಹಾರ ಸಿಗಲಿಲ್ಲ. ಕೊನೆಗೆ ನಿಮಿತ್ತ ಹೇಳುವುದರಲ್ಲಿ ಹೆಸರುವಾಸಿಯಾಗಿದ್ದ. ಕಲ್ಲೂರು ಜೋಯಿಸರ ಹತ್ತಿರ ಹೋದರು. ಅವರು ಜಾತಕ ನೋಡಿ ಹೆಗ್ಗಡೆಗೆ ಅಷ್ಟೇನೂ ಅರ್ಥವಾಗದ 'ಕುಜರಾಹು ಸಂಧಿ ಗುರು ಅಂಗಾರಕ ಕ್ರೂರ ಕೂಟ' ಇತ್ಯಾದಿ ಜ್ಯೋತಿಷ್ಯ ಹೇಳಿ ರಂಗಮ್ಮನಿಗೆ ಒಂದು ಕಂಟಕವಿದೆಯೆಂದು ಮಗುವಿನ ತಂದೆಯಾ ಗಲಿ ತಾಯಿಯಾಗಲಿ ಅದಕ್ಕೆ ತುತ್ತಾಗಬಹುದೆಂದು ತಿಳಿಸಿದ್ದರು. ಹೊನ್ನಿನ ಗೋದಾನ ಅಥವಾ ತೀರ್ಥ ಯಾತ್ರೆಯಂತಹ ದೊಡ್ಡ ಹರಕೆ ಹೊತ್ತು ನೆರವೇರಿಸಿದ ಪಕ್ಷದಲ್ಲಿ ವಿಧಿಯ ಕ್ರೌರ್ಯ ಸೌಮ್ಯತರ ವಾಗುತ್ತದೆಂದು ಪರಿಹಾರಾರ್ಥವನ್ನು ಸೂಚಿಸಿದ್ದರು.

ದೊಡ್ಡಣ್ಣ ಹೆಗ್ಗಡೆಯವರು ತೀರ್ಥಯಾತ್ರೆಯ ಹರಕೆಯನ್ನು ಹೊತ್ತು ತಿರುಪತಿಗೆ ಯಾತ್ರೆ ಹೊರಡುವುದಾಗಿ ಮುಡಿಪು ಕೊಟ್ಟ ಮೇಲೆ ರಂಗಮ್ಮನವರಿಗೆ ರೋಗ ಕಡಿಮೆಯಾಗಿ ಕ್ಷೇಮದಿಂದಲೇ ಒಂದು ಗಂಡು ಮಗುವನ್ನು ಹಡೆದರು. ಧರ್ಮು ನಾಲ್ಕನೇ ವರ್ಷದವನಾಗಿದ್ದಾಗ ಆ ಪ್ರಾಂತದ ಒಂದು ತಂಡ ತಿರುಪತಿಗೆ ಯಾತ್ರೆ ಹೊರಡಲು ಸಿದ್ಧವಾಗಿತ್ತು. ಅವರ ಜೊತೆ ಯಾತ್ರೆ ಹೋದವರು ಹಿಂತಿರುಗಿ ಬರಲೇ ಇಲ್ಲ. ಇದರಿಂದ ಧರ್ಮು ಮತ್ತು ರಂಗಮ್ಮನ ಸಂಕಟ ನೂರ್ಮಡಿಗೊಂಡಿತ್ತು.

ಮತ್ತೆ ಮಕ್ಕಳೆಲ್ಲರೂ ಹಿರಿಯರ ಜೊತೆ ಕಲ್ಲೂರು ದೇವಸ್ಥಾನಕ್ಕೆ ಹೋದಾಗ ಧರ್ಮು ಸಹ ಹೋಗಿರುತ್ತಾನೆ. ಅಲ್ಲಿ ಕಂಡ ಒಬ್ಬ ಬ್ರಾಹಣ ವಿಧವೆ ಕೇಶಮುಂಡನ ಮಾಡಿಸಿಕೊಂಡಿರುವುದನ್ನು ಕಂಡು ಬೋಳು ಹಾರ್ತಿ ಎಂದು ಅಪಹಾಸ್ಯ ಮಾಡುತ್ತಾರೆ. ಆದರೆ ಧರ್ಮು ಏನೊಂದು ಮಾತನಾಡದೆ ಚಿಂತಾ ಗ್ರಸ್ತನಾಗಿ ಮೆಟ್ಟಿಲಿಳಿಯತೊಡಗಿದನು. ಕಾಡು ಆ ಹೆಂಗಸಿಗೆ ಬೊಳು ಹಾರ್ತಿ ಎಂದು ಕೊಟ್ಟ ವಿವರಣೆ ಯನ್ನು ಕೇಳಿ ಅವನಿಗೆ ಗುಂಡು ಹೊಡೆದಂತೆ ಅಗಿತ್ತು. ತಿರುಪತಿಗೆ ಹೋದ ಅಪ್ಪಯ್ಯ ಸತ್ತಿದ್ದರೆ ಅವ್ವನೂ ಹೀಗೆಯೇ ಮಂಡೆ ಬೋಳಿಸಿಕೊಂಡು ವಿಕಾರವಾಗ್ತಾಳೆನೋ ಎಂಬೊಂದು ಮಹಾಸಂಕಟದ ಭೀತಿ ಅವನ ಹೃದಯದಲ್ಲಿ ಸಂಚರಿಸತೊಡಗಿತು. ಮುಂದೆ ಹೆಂಗಸರ ಜೊತೆ ತಂಗಿಯ ಮಗು ಚೆಲುವಯ್ಯ ನನ್ನು ಎತ್ತಿಕೊಂಡು ಮೆಟ್ಟಿಲಿಳಿಯುತ್ತಿದ್ದ ತನ್ನ ಮಾತೃ ಮೂರ್ತಿಯನ್ನು ನೋಡಿ ಅವನ ಎದೆ ಕರಗಿ ದಂತಾಯಿತು. ಅವನು ಹೆದರಿ ಕಾಡುವನ್ನು ಕುರಿತು ಕಾಡಣ್ಣಯ್ಯ ನಮ್ಮಲ್ಲಿಯೂ ಹಿಂಗೆ ಮಾಡ್ತಾರೆನೋ ಗಂಡ ಸತ್ತರೆ ಎಂದು ಪ್ರಶ್ನಿಸಿದನು. ಅದಕ್ಕೆ ಕಾಡು ಥೂ! ಎಂತ ಮಾತಾಡ್ತಿಯೋ ನಮ್ಮಲ್ಲಿ ಯಾರಿಗೂ ಹಿಂಗೆ ಮಾಡೊದಿಲ್ಲೊ ಬ್ರಾಂಬ್ರ ಜಾತೀಲಿ ಮಾತ್ರ ಹಂಗೆ ಮಾಡಾದು ಎಂದಾಗ, ಧರ್ಮು 'ಸದ್ಯ ನಾನು ನಮ್ಮವ್ವನು ಬಿರಾಂಬ್ರ ಜಾತೀಲಿ ಹುಟ್ಟದೇ ಗೌಡರ ಜಾತೀಲಿ ಹುಟ್ಟಿದಿವಲ್ಲ' ಎಂದು ಮನಸ್ಸಿನಲ್ಲಿಯೇ ಸಮಾಧಾನ ಪಟ್ಟುಕೊಂಡನು.

## ಪುಟ್ಟಿ :

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಬರುವ ಮತ್ತೊಂದು ಬಾಲಕಿಯ ಪಾತ್ರ ಈ ಪುಟ್ಟಿ, ಈಕೆ ಕುಳವಾಡಿ ಸಣ್ಣನ ಮಗಳು. ಗುಡಿಸಲು ಮೂಲೆಯಲ್ಲಿದ್ದ ಒಲೆಯ ಮೇಲೆ ಗಡಿಗೆಯಲ್ಲಿ ಗಂಜಿ ಬೇಯಿಸುತ್ತಿದ್ದವಳು, ಕೈಯಲ್ಲಿ ಒಂದು ಬಿದಿರು ಹಿಡಿಯ ಕರಟದ ಸೌಟನ್ನು ಹಿಡಿದು ಅರೆ ಬೆಳಕಿ ನಲ್ಲಿ ಗಂಜಿ ಬೆಂದಿತೆ ಇಲ್ಲವೇ ಎಂದು ಅಗುಳನ್ನು ಹಿಸುಕಿ ನೋಡುತ್ತಿದ್ದಳು. ಒಂದು ಗೀಸಿನ ಚಾಪೆಯ ಮೇಲೆ ಕಂಬಳಿ ಹೊದೆದು ಮಲಗಿ ನರಳುತ್ತಿದ್ದ ಸಣ್ಣನ ಕೊನೆಯ ಮಗ ನಾಲ್ಕೈದು ವರ್ಷದ ಹುಡುಗ ಗಂಗನ ಬಳಿ ಕುಳಿತು ಕುಳವಾಡಿ ಸಣ್ಣ ಕೆಮ್ಮುತ್ತಾ, ಸಿಂಬಳ ಸುರಿಸುತ್ತಿದ್ದ ಮಗನಿಗೆ ಸಮಾಧಾನ ಹೇಳು ತ್ತಿದ್ದ. ಆಯ್ತು ಮಗ ಆಯ್ತು ಗಂಜಿ ಕುಡಿದು ಸುಮ್ಮನೆ ಮಲಗಬೌದಂತೆ ಅಳಬ್ಯಾಡ ಸುಮ್ಕಿರು. ಆಯ್ತು

ಇನ್ನೇನು ಆಯ್ತು ಅಲ್ವೇನೇ ಪುಟ್ಟಿ ಎಂದು ಮಗನ ಸಂತೃಕೆಗಾಗಿ ಮಗಳನ್ನು ಹತ್ತನೆಯ ಸಲವೋ ಹನ್ನೊಂದನೆಯ ಸಲವೋ ಯಾವ ನಿಕೃಷ್ಟ ಉತ್ತರದ ಅಭಿಲಾಷೆಯು ಇಲ್ಲದ ಪ್ರಶ್ನೆ ಕೇಳಿದನು.

ಕುಳವಾಡಿ ಸಣ್ಣ ಆ ಕೇರಿಗೆಲ್ಲ ವಯಸ್ಸಾದ ವ್ಯಕ್ತಿ. ಮಲೆನಾಡಿನಲ್ಲಿ ಅದರಲ್ಲಿಯೂ ಬಡತನವೇ ಬಾಳಾಗಿದ್ದ ಕೀಳುಜಾತಿಯ ಜನರಲ್ಲಿ ಐವತ್ತನ್ನು ಕಂಡವನೇ ಅತ್ಯಂತ ದೀರ್ಘಾಯುವಾಗಿದ್ದ ಆ ಕಾಲ ದಲ್ಲಿ ಕುಳವಾಡಿ ಸಣ್ಣನಿಗೆ ಅವನ ಕೇರಿಯಲ್ಲಿ ಮಾತ್ರವಲ್ಲದೇ ಸಿಂಬಾವಿ, ಕೋಣೂರು, ಬೆಟ್ಟಳ್ಳಿ ಮೊದಲಾದ ಎಲ್ಲಾ ಕೇರಿಯಲ್ಲೂ ಗೌರವ ಸಲ್ಲುತ್ತಿತ್ತು. ಅವನ ಹೆಂಡತಿ ತೀರಿಹೋಗಿ ನಾಲ್ಕೈದು ವರ್ಷ ಗಳಾಗಿದ್ದರೂ ಅವನು ಮತ್ತೆ ಮದುವೆಯಾಗಿರಲಿಲ್ಲ. ಅವನೊಡನೆ ಸೀರುಡುಕೆಯಾಗಲು ಆಸೆ ಪಟ್ಟವ ರನ್ನು ಅವನು ಒಪ್ಪಿರಲಿಲ್ಲ. ಕಡೆಗೆ ಗಂಜಿ ಬೇಯಿಸುವುದಕ್ಕಾದರೂ ಎಂದು ಹೆಣ್ಣು ಕೈ ಇರಲಿ ಎಂದು ಸಲಹೆ ಕೊಟ್ಟ ಹಿತೈಷಿಗಳ ಮಾತನ್ನು ಅವನು ಮುಗುಳುನಕ್ಕು ನಿರಾಕರಿಸಿದ್ದನು. ಅವನ ಹಿರಿಯ ಮಗಳು ಪುಟ್ಟಿಯು ತನ್ನ ತಾಯಿ ಗಂಗನನ್ನು ಹೆತ್ತು ತೀರಿ ಹೋದ ಮೇಲೆ ಅಪ್ಪನ ಆರೈಕೆಯನ್ನು ತಂಗಿ ತಮ್ಮಂದಿರ ಲಾಲನೆ ಪಾಲನೆಯನ್ನು ನೋಡಿಕೊಂಡು ಬರುತ್ತಿದ್ದಳು. ಅವಳಿಗೂ ಮದುವೆಯಾಗುವ ವಯಸ್ಸು. ಬೇಗ ಮಾಡಿ ಬಿಡು ಎಂದು ನೆಂಟರಿಷ್ಟರು ಕುಳವಾಡಿ ಸಣ್ಣನಿಗೆ ಸಲಹೆ ನೀಡುತ್ತಿದ್ದರು. ಆದರೆ ಅವನು "ಅವಳಿನ್ನು ನೆರೆದು ಎರಡು ವರ್ಷವೂ ಆಗಿಲ್ಲ. ಅವಳಿಗಿಂತಲೂ ದೊಡ್ಡವರು ಕೇರಿ ಯಲ್ಲಿ ಮದುವೆಯಾಗದೇ ಇರುವವರು ಇಲ್ಲವೇ? ಇಷ್ಟು ಅವಸರ ಏಕೆ ಅವಳ ಮದುವೆಗೆ?"[೧೩] ಎಂದು ಸಮಾಧಾನ ಹೇಳುತ್ತಿದ್ದನು. ಅಲ್ಲದೇ ಮಗಳು ಮದುವೆಯಾಗಿ ಹೋದರೆ ತನ್ನ ಸಂಸಾರ ಸಾಗುವುದು ಕಷ್ಟವಾಗುತ್ತದೆ. ಆದ್ದರಿಂದ ಏನಾದರೂ ಮಾಡಿ ಮದುವೆಯಾದ ಮೇಲೂ ಮಗಳು ಮನೆಯಲ್ಲಿಯೇ ಉಳಿಯುವಂತೆ ಒಬ್ಬ ಮನೆ ಅಳಿಯನನ್ನು ಮಾಡಿಕೊಂಡರೆ ತನ್ನ ಇಳಿ ವಯಸ್ಸಿನಲ್ಲಿ ತನಗೂ ಒಂದು ದಿಕ್ಕಾಗುತ್ತದೆ ಎಂದು ಅವನಿಗೆ ಆಸೆಯಿತ್ತು.

ತಿಮ್ಮಪ್ಪ ಹೆಗ್ಗಡೆ ಬಂದು ಒಡೆಯರ ದಿಬ್ಬದ ಮೇಲೆ ನಿಂತು ಆಳುಗಳನ್ನು ಕೂಗುತ್ತಾ ಅಬ್ಬರಿಸಿ ದಾಗ ಅವನ ಆರ್ಭಟವನ್ನು ಕೇಳಿದ ಸಣ್ಣ ತನ್ನ ಮಗಳಿಗೆ 'ಏ ಪುಟ್ಟಿ ಹೆಗಡೇರ ಸವಾರಿ ಬಂದ ಹಾಗೆ ಕಾಣ್ತದೆ ಕೆಲಸಕ್ಕೆ ಕರೆಯೋಕೆ. ಎಲ್ಲರೂ ಬಿಡಾರದಾಗೆ ಇದಾರೆ. ಒಬ್ಬರೂ ಹೊರಗಡೆ ತಲೆ ಹಾಕಿದಂಗೆ ಕಾಣ್ತಿಲ್ಲ. ಇನ್ನು ಅವರೆ ಕೇರಿಗೆ ನುಗ್ಗಿದ್ರೆ ಇಡೀ ಕೇರಿಗೆ ಅಪಶಕುನ! ಹೋಗಿ ಆ ಬೈರಗಾದ್ರೂ ಹೇಳೆ ಎಂದನು. ಆಗ ಪುಟ್ಟಿಯು ಇಲ್ಲಿಂದಲೆ ಕಿಂಡಿಲಿ ಕೂಗಿ ಹೇಳ್ತಿನಿ ಅಪ್ಪಯ್ಯ. ನಾನು ಅವನ ಬಿಡಾರದಾಗೆ ಕಾಲಿಡಾದಿಲ್ಲ ಎಂದು ದಬ್ಬೆ ಹೆಣೆದು ಕೆಮ್ಮಣ್ಣು ಮೆತ್ತಿದ್ದ ಗೋಡೆಯ ಬೆಳಕಿಂಡಿಯಲ್ಲಿ ಮುಖವಿಟ್ಟು, 'ಓ ಬೈರ ಮಾವಾ ಸಣ್ಣ ಒಡೆರು ಕರಿತಾರಂತೋ ಕೆಲಸಕ್ಕೆ.'ಎಂದು ಕೂಗಿಹೇಳಿದಳು.

ಮದುವೆಯ ವಯಸ್ಸಿಗೆ ಬಂದ ಹುಡುಗಿ ಪುಟ್ಟಿಯಲ್ಲಿ ವಯಸ್ಸಿಗೆ ಸಹಜವಾದ ಗುಣಗಳಿದ್ದರೂ ತನ್ನ ತಂದೆ ಮತ್ತು ತಮ್ಮಂದಿರ ಲಾಲನೆ ಪಾಲನೆಗಾಗಿ ನಿಂತವಳು ಸಹಜವಾದ ಕಾಮನೆಗಳನ್ನು ಹತ್ತಿಕ್ಕಲು ಅಸಾಧ್ಯವಾದವಳು. ತನ್ನ ಕೇರಿಯವನೇ ಆದ ಓರಗೆಯವನಾದ ಗುತ್ತಿಯೊಡನೆ ಆಕೆ ಆಪ್ತ ಗುಪ್ತ ಒಡನಾಟಗಳನ್ನು ಆಡಿ ಹರ್ಷಗೊಂಡಿದ್ದಳು. ಗುತ್ತಿಯೇ ಹೇಳುವಂತೆ, ಈಗಲೂ ಅವಿವಾಹಿತಳಾಗಿಯೇ ಉಳಿದಿರುವ ಪುಟ್ಟಿ ತನ್ನನ್ನು ಒಂದು ದಿನ ಬೈಗುಗಪ್ಪಿನಲ್ಲಿ ಒಡೆಯರ ಕಣದ ಹುಲ್ಲು ಬಣಬೆಯ ಹಿಂದೆ ಮರೆಗೆ ಕರೆದುಕೊಂಡು ಹೋಗಿರುವ ಸಂಗತಿ ಪುಟ್ಟಿಯ ನಿಷ್ಠುರವಾದ ಕಾಮ ಪ್ರೇಮಕ್ಕೆ ಮೂಕ ಸಾಕ್ಷಿಯಾದಂತಿದೆ.

**ಕೊನೆ ಟಿಪ್ಪಣಿಗಳು**

೧) ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೨೦೦೪, ಪುಟ ೪೯

೨) ಅದೇ, ಪುಟ ೧೦೭

೩) ಅದೇ, ಪುಟ ೨೭೫

೪) ಅದೇ, ಪುಟ ೭೫

೫) ಅದೇ, ಪುಟ ೧೧೨

೬) ಅದೇ, ಪುಟ ೨೦೩

೭) ಅದೇ, ಪುಟ ೧೮೧

೮) ಅದೇ, ಪುಟ ೨೯೭

೯) ಅದೇ, ಪುಟ ೪೯೯

೧೦) ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ೧೯೯೭, ಪುಟ ೭೯

೧೧) ಅದೇ, ಪುಟ ೮೨

೧೨) ಅದೇ, ಪುಟ ೪೪೧

೧೩) ಅದೇ, ಪುಟ ೫೩೫

# ಅಧ್ಯಾಯ ೩

# ಕುವೆಂಪು ಕಾದಂಬರಿಗಳಲ್ಲಿನ ಬಾಲಪ್ರಪಂಚ ಹಾಗೂ ಸಮಕಾಲೀನ ಒತ್ತಡಗಳು



ಕುವೆಂಪುರವರ ಕಲ್ಪನಾನುಭವದ ಮೂಸೆಯಲ್ಲಿ ಮೂಡಿಬಂದ 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ' ಕಾದಂಬರಿಗಳು ಸ್ತಬ್ದ ಮಲೆನಾಡಿನ ಸಮಗ್ರ ಜನಜೀವನವನ್ನು ಎಳೆ ಎಳೆಯಾಗಿ ಚಿತ್ರಿಸುತ್ತವೆ. ಕುವೆಂಪುರವರು ಕಾದಂಬರಿಕಾರರಲ್ಲ, ಇವರ ಈ ಕೃತಿಗಳನ್ನು ಕಾದಂಬರಿ ಎಂದು ಕರೆಯಲು ಸಾಧ್ಯವಿಲ್ಲ, ಕಾದಂಬರಿಯ ಬಂಧ ಹಾಗೂ ನಿರೂಪಣೆ ತುಂಬಾ ಸಡಿಲವಾಗಿದೆ ಎಂದು ವಿಮರ್ಶಿಸುವ ಖ್ಯಾತ ವಿಮರ್ಶಕರು ಯಾವ ದೃಷ್ಟಿಕೋನದಲ್ಲಿ ಕುವೆಂಪು ಕಾದಂಬರಿಗಳನ್ನು ವಿಶ್ಲೇಷಿಸಿದ್ದಾರೆಂದು ತಿಳಿಯದು. ಒಂದು ಕಾದಂಬರಿಗೆ ಗೊತ್ತಾದ ಬಂಧ ಮತ್ತು ಸ್ಪಷ್ಟ ನಿರೂಪಣೆ ಇದ್ದು, ಅದರಲ್ಲಿ ಹುರುಳಿಲ್ಲವಾದರೆ ಅದನ್ನು ಸುಸಂಬದ್ದ ಕಾದಂಬರಿ ಎಂದು ಕರೆಯಲು ಸಾಧ್ಯವೇ ಎಂಬ ಪ್ರಶ್ನೆ ಎದುರಾಗುತ್ತದೆ. ಅಂತೆಯೇ ಕುವೆಂಪುರವರ ಕಾದಂಬರಿಗಳಲ್ಲಿ ಬಂಧ ಅನುಬಂಧವಾಗಿರಲಿ, ನಿರೂಪಣೆ ಸಡಿಲವಾಗಿರಲಿ, ಅದರೊಳಗಿನ ಜೀವನ ದರ್ಶನ, ಸಂಸ್ಕೃತಿ, ಪರಂಪರೆಯ ಆಯಾಮಗಳನ್ನು ಅರಿಯದೇ ಹೋದರೆ ಪ್ರಯೋಜನವೇನು? ಕುವೆಂಪು ತಮ್ಮ ಕಾದಂಬರಿಗಳ ಮೂಲಕ ಮಲೆನಾಡಿನ ಎಲ್ಲಾ ಜಾತಿ ವರ್ಗಗಳ ಅಪ್ಪಟ ಗ್ರಾಮೀಣ ಸೊಗಡಿನ ಸಾಮಾಜಿಕತೆಗೆ ಕನ್ನಡಿ ಹಿಡಿದಿದ್ದಾರೆ. ಇಲ್ಲಿ ಕುವೆಂಪು ಬ್ರಹ್ಮಣ ವಿರೋಧಿ. ಶೂದ್ರಾತಿಶೂದ್ರರನ್ನು ಅಸ್ಪೃಶ್ಯರನ್ನು ಹೀಗಳೆದು ಬರೆದಿದ್ದಾರೆ ಎನ್ನುವ ಮಾತುಗಳು ಸತ್ಯಕ್ಕೆ ದೂರವಾದವು. ಏಕೆಂದರೆ ಸಾಮಾಜಿಕ ಸನ್ನಿವೇಶಗಳನ್ನು, ನೈಜ ಪರಿಸ್ಥಿತಿಗಳನ್ನು, ಪರಿಸರವನ್ನು ತಂದಿಡುವ ಪ್ರಯತ್ನವಷ್ಟೇ ಇದು. ಅಲ್ಲದೆ ಎಲ್ಲಾ ಕಪ್ಪು ಒರತೆಗಳಿಗೆ ಬಿಂಕಕ್ಕಾಗಿ ಬಿಳಿಯ ಬಟ್ಟೆಯನ್ನು ತೊಡಿಸಿ ನಯ ನಾಜೂಕಿನಿಂದ ಹೇಳಿಸಿ ಸೈ ಎನಿಸಿಕೊಳ್ಳುವ ಉಮೇದೇನೂ ಅವರಿಗೆ ಇಲ್ಲವಲ್ಲ. ಕುವೆಂಪು ತನ್ನ ಕಾದಂಬರಿಗಳ ಮೂಲಕ ಇಡೀ ಮಲೆನಾಡಿನ ಜನಜೀವನದ ಸಾಮಾಜಿಕ ಸ್ಥಿತಿಗತಿಗಳ ಚಿತ್ರಣ ಕಟ್ಟಿಕೊಟ್ಟಿದ್ದಾರಷ್ಟೇ. ಇಲ್ಲಿನ ಆಚಾರ ವಿಚಾರಗಳು, ರೂಢಿ – ಸಂಪ್ರದಾಯಗಳು ಜನರ ಸಾಮಾಜಿಕ ಬದುಕು, ಬದುಕಿನ ಹೋರಾಟಗಳು ಎಲ್ಲವನ್ನು ಸವಿವರವಾಗಿ ಸೆರೆಹಿಡಿಯುವ ಪ್ರಯತ್ನ. ಅಪ್ಪಟ ದೇಶೀ ಸಂಸ್ಕೃತಿಯ, ನಿಸರ್ಗದ ಮಡಿಲಿನ ಮಣ್ಣಿನ ವಾಸನೆಯುಳ್ಳ ಬದುಕಿನ ನಡುವೆ ನಡೆಯುವ, ನಡೆಯಬಹುದಾದ ಎಲ್ಲ ತೆರನಾದ ಗೌಜು ಗದ್ದಲಗಳನ್ನು ತೋರಿಸಿದ್ದಾರೆ. ನಾಗರೀಕ ಸಮಾಜದಿಂದ ಅನಾಗರೀಕರವರೆಗೆ, ಅನಕ್ಷರಸ್ಥರಿಂದ ಅಕ್ಷರಸ್ಥರವರೆಗೆ, ಮೂಢರಿಂದ ಜ್ಞಾನಿಗಳವರೆಗೆ, ಧಣಿಗಳಿಂದ ದೀನರವರೆಗೆ ಎಲ್ಲಾ ರೀತಿಯ ಜಾತಿ ವರ್ಗದ ಜನಜೀವನ, ಸಾಮರಸ್ಯ, ಸಂಕಟ, ಹೊಡೆದಾಟ, ಕಳ್ಳತನ, ಮೋಸ ಎಲ್ಲವೂ ಇಲ್ಲಿ ಮಿಳಿತವಾಗಿವೆ.

ಕಾನೂರು ಹೆಗ್ಗಡಿತಿ ಕಾದಂಬರಿ ಆರಂಭವಾಗುವುದು ಹೂವಯ್ಯ ರಾಮಯ್ಯ ಆಗಮನವಾಗುವ ರಾಮತೀರ್ಥದ ಕಲ್ಲುಸಾರದ ಮೇಲೆ. ಹೂವಯ್ಯ ರಾಮಯ್ಯರು ಮೈಸೂರಿನಿಂದ ವಿದ್ಯಾಭ್ಯಾಸ ಮುಗಿಸಿ, ಕಲ್ಲುಸಾರವನ್ನು ದಾಟಿ ಕಾನೂರಿಗೆ ಬರುತ್ತಾರೆ. ಇಲ್ಲಿ ತಿಳಿಯಬೇಕಾದ ಅಂಶವೇನೆಂದರೆ ಅಪ್ಪಟ ಗ್ರಾಮೀಣ ಸೊಗಡಿನ ಅನಕ್ಷರ ಪ್ರಪಂಚದೆಡೆಗೆ ಶಿಕ್ಷಣ, ಸಂಸ್ಕೃತಿ, ನಾಗರಿಕತೆಗಳು ಹರಿದು ಬರುತ್ತಿದ್ದಾವೆ ಎಂಬುದು. ಕುವೆಂಪು ತನ್ಮೂಲಕ ನಾಡಿನ ದೇಶದ ಮೂಲೆ ಮೂಲೆಯ ಭಿನ್ನ ವಿಭಿನ್ನ ಸಮುದಾಯ ಗಳಿಗೆ ಶಿಕ್ಷಣವನ್ನು ತಲುಪಿಸಬೇಕೆಂಬ ಧೋರಣೆಯನ್ನು ವ್ಯಕ್ತಪಡಿಸಿದ್ದಾರೆ ಎಂದು ತೋರುತ್ತದೆ.

ಹೂವಯ್ಯ ರಾಮಯ್ಯರು ರಾಮತೀರ್ಥದ ಕಲ್ಲುಸಾರವನ್ನು ದಾಟಿ ಬಂದಾಗ 'ಅಂತು ಅವರಿಬ್ಬರು ಆ ಗಾಡಿ ಮತ್ತು ಎತ್ತುಗಳನ್ನು ನೋಡಿ ಮನೆಯವರನ್ನೇ ಕಂಡಂತಾಗಿ ಸಂತೋಷಗೊಂಡರು. ಅವುಗಳನ್ನು ನೋಡಿದ ಅವರ ಮನಸ್ಸಿನಿಂದ ಮೈಸೂರು, ಚಾಮುಂಡಿ ಬೆಟ್ಟ, ಅರಮನೆ, ಕುಕ್ಕರಹಳ್ಳಿಯ ಕೆರೆ, ಅಠಾರ ಕಛೇರಿ, ಹೈಸ್ಕೂಲು, ಕಾಲೇಜು, ಜನಸಂದಣಿ ಎಲ್ಲವೂ ಮಾಯವಾಗಿ ಅದಕ್ಕೆ ಬದಲಾಗಿ ತಮ್ಮ ಮನೆ, ಕಾಡು, ಕೊಠಡಿ, ಗದ್ದೆ, ದನ ಕರು, ತೋಟ, ಕೂಲಿ ಆಳುಗಳು ಮೊದಲಾದವು ಸುಳಿದವು. ಅಲ್ಲದೆ ತಮ್ಮನ್ನು ಮನೆಗೊಯ್ಯುವ ಪ್ರಾಣಿಗಳ ವಿಚಾರದಲ್ಲಿ ಅವರಿಗೆ ಪ್ರೀತಿ ಅಲ್ಲದೆ ಬೇರೆ ಯಾವ ಭಾವಕ್ಕೂ ಸ್ಥಳವಿರಲಿಲ್ಲ.

ಹೂವಯ್ಯ ಮೈಸೂರಿನಲ್ಲಿ ವಿದ್ಯಾಭ್ಯಾಸ ಮುಗಿಸಿ ಕಾನೂರಿಗೆ ಹಿಂದಿರುಗಿ ಒಬ್ಬ ಆದರ್ಶ ವ್ಯಕ್ತಿಯಾಗಿ ಮುಂದುವರಿಯುತ್ತಾನೆ. ತಾನೇ ನಿಂತು ಹೊಲ ಗದ್ದೆಗಳಲ್ಲಿ ಕೆಲಸ ಮಾಡುವುದು. ತೋಟ ಗದ್ದೆಗಳನ್ನು ನೋಡಿಕೊಳ್ಳುವುದು ಮುಂತಾದ ರೈತಾಪಿ ವರ್ಗದವರ ಕಸುಬುಗಳಲ್ಲಿ ಆತನಿಗೆ ಶ್ರದ್ಧೆ ಇದೆ, ಆಸಕ್ತಿಯಿದೆ. ದುಡಿಮೆಯೇ ದೇವರೆಂದು ನಂಬಿದವನೀತ. ಮಣ್ಣಿನಿಂದ ಬಂಗಾರ ಬೆಳೆಯುವ ತನ್ನ ಪರಿಸರದಲ್ಲಿಯೇ ಬದುಕುವ ಮಹದಿಚ್ಛೆಯನ್ನು ರೂಢಿಸಿಕೊಂಡವನು. ಸುಶಿಕ್ಷಿತ ಪರಂಪರೆ ವ್ಯವಸಾಯ, ಕೃಷಿ, ತೋಟಗಾರಿಕೆಯತ್ತ ಹರಿಯುವ ಸಾಮಾಜಿಕ ಅಗತ್ಯತೆ ಹೂವಯ್ಯನಿಂದ ತೋರಲ್ಪಟ್ಟಿದೆ.

ಕುವೆಂಪುರವರ ಕಾದಂಬರಿಗಳಲ್ಲಿ ಕಿಲಿಸ್ತರ, ಮುಸ್ಲಿಮರ, ಗೌಡ, ನಾಯಕರ, ದಲಿತ ಕೂಲಿ ಆಳುಗಳ, ಜೀತದಾಳುಗಳ, ಸೇರೆಗಾರರ, ಬ್ರಾಹ್ಮಣರ ಜನಜೀವನವನ್ನು ಕಾಣಬಹುದು. ಕಾವಲಿಲ್ಲದ ಕೋಟೆಗೆ ನುಗ್ಗಲು ಶತ್ರುವಿಗೆ ಸೈನ್ಯವೇಕೆ? ಎಂಬಂತೆ ತಮ್ಮ ಧರ್ಮದ ವಿಚಾರವಾದ ಯಾವ ಬುದ್ಧಿ ಪೂರ್ವಕ ಜ್ಞಾನವೂ ಇಲ್ಲದೆ ಪರಂಪರಾನುಗತವಾದ ಅಂಧ ವಿಚಾರ ಸಮೂಹವನ್ನೆ ತತ್ವವೆಂದು ನಂಬಿ, ಆಲೋಚನಾ ಶಕ್ತಿ ಲವಲೇಶವೂ ಇಲ್ಲದಿದ್ದವರನ್ನು, ಜಡಬುದ್ಧಿಗಳನ್ನು ಮತಾಂತರಗೊಳಿಸುವುದು ಸುಲಭವಲ್ಲ. ಆದರೆ ಜಡಬುದ್ಧಿಗಳಾಗದೇ ತುಸು ಮಟ್ಟಿಗೆ ಜಾಗೃತಮತಿಗಳಾಗಿಯೂ ತಮ್ಮ ಮತ ಧರ್ಮ, ಸನಾತನ ಮೂಲ ತತ್ವಗಳನ್ನರಿಯದವರ ನಂಬಿಕೆಗಳನ್ನು ಅಲ್ಲಾಡಿಸುವುದು ಅಷ್ಟೇನು ಕಷ್ಟವಲ್ಲ.

ಪಾದ್ರಿ ಜೀವರತ್ನಯ್ಯ ಮಲೆನಾಡಿನ ಗೌಡರಲ್ಲಿ ಅಂತವರನ್ನೇ ಪತ್ತೆ ಹಚ್ಚಿ ತನ್ನ ಕೆಲಸಕ್ಕೆ ಕೈಹಾಕಿದ್ದನು. ಸಿಂಧುವಳ್ಳಿ ಚಿನ್ನಪ್ಪನೇ ಪಾದ್ರಿಯ ಮೊತ್ತ ಮೊದಲ ಬೇಟೆಯಾಗಿದ್ದನು.

ತೀರ್ಥಹಳ್ಳಿಯ ಪಾದ್ರಿ ಜೀವರತ್ನಯ್ಯ ಮಲೆನಾಡಿನ ಉತ್ಸಾಹಿ ಯುವಕರ ಉತ್ಸಾಹವನ್ನು ಇಮ್ಮಡಿಗೊಳಿಸುವಂತೆ ಬೈಸಿಕಲ್ಲನ್ನು ಪರಿಚಯಿಸುತ್ತಾನೆ. ಕುವೆಂಪು ಹೇಳುವಂತೆ ಬೈಸಿಕಲ್ಲು, ಕಾಫಿ, ಸ್ಕೂಲು, ಇವೆಲ್ಲವೂ ನವನಾಗರೀಕತೆಯ ಸಂಕೇತಗಳಾಗಿವೆ. ಮಲೆನಾಡಿನ ಗ್ರಾಮ್ಯದಲ್ಲಿ ಬೈಸಿಕಲ್ ಎಂಬ ಪದ ಬೀಸೆಕಲ್ಲಾಗಿ ಬದಲಾಗುತ್ತದೆ. ಸಮತಟ್ಟಿನ ಪ್ರದೇಶಗಳು ಮಲೆನಾಡಲ್ಲಿ ಸಿಗುವುದು ಅಪರೂಪ. ಅಂಥದ್ದರಲ್ಲಿ ಮಲೆನಾಡಿನಲ್ಲಿ ಬೀಸೆಕಲ್ಲು ಸವಾರಿಗೆ ಒಂದು ಪ್ರಶಸ್ತವಾದ ಹೆಕ್ಕಲು(ಮೈದಾನ)ವನ್ನು ಜೀವ ರತ್ನಯ್ಯ ಪಾದ್ರಿ ಆಯ್ಕೆ ಮಾಡುತ್ತಾನೆ. ಇಲ್ಲಿ ಸವಾರಿಗಿಂತ ಮುಖ್ಯವಾಗಿ ಬೇಕಾಗಿರುವುದು ಪ್ರಚಾರ. ಅದಕ್ಕೆ ಸಾಕಷ್ಟು ಜನ ಸೇರಬೇಕು. ಅವರೆಲ್ಲರೂ ಸೇರಿ ಮೂಕವಿಸ್ಮಿತರಾಗಿ ಬೀಸೆಕಲ್ಲು ಸವಾರಿ ನೋಡು ವುದಕ್ಕೆ ಪ್ರಶಸ್ತವಾದ ಸ್ಥಳವನ್ನೇ ಪಾದ್ರಿಗಳು ಆಯ್ಕೆ ಮಾಡುತ್ತಾರೆ. ಪಾದ್ರಿಯು ಆ ಬೈಸಿಕಲ್ಲು ನೂಕಿ ಕೊಂಡೋ ಇಲ್ಲವೇ ಹತ್ತಿಕೊಂಡೋ ಬರುವ ಬದಲು ಅದನ್ನು ಬಚ್ಚನ ಕೈಯಲ್ಲಿ ಹೊರಿಸಿಕೊಂಡು ಬರುತ್ತಾನೆ. ಆಧುನಿಕ ವಸ್ತುವಿನ ಬಗೆಗೆ ಕುತೂಹಲ ಸಂಭ್ರಮಗಳಲ್ಲಿ ಮುಳುಗಿಹೋದ ಮಲೆನಾಡಿನ ಜನತೆ, ಅವರ ಸಾಮಾಜಿಕ ಅಂತರಗಳಾದ ಜಾತಿ-ಮತ, ಮಡಿ-ಮೈಲಿಗೆ, ಸ್ಪೃಶ್ಯ-ಅಸ್ಪೃಶ್ಯ ಇತ್ಯಾದಿಗಳನ್ನು ಮರೆತು ತಾಮುಂದು ನಾಮುಂದು ಎಂದು ಆ ನವನವೀನ ವಸ್ತುವನ್ನು ನೋಡಲು ಮತ್ತು ಮುಟ್ಟಲು ನಿರ್ಮಾಣವಾಗುವ ಸನ್ನಿವೇಶ ಆಧುನಿಕತೆಯ ಸಾಮಾಜಿಕ ಹೊಸಸಂಬಂಧವನ್ನು ಪರಿಚಯಿಸುತ್ತದೆ. ಆ ಜನರ ನೂಕಾಟದಲ್ಲಿ ಮುಟ್ಟಬಹುದಾದವರು ಮುಟ್ಟಬಾರದವರು ಎಂಬ ಬೇಧ-ಭಾವ ಮರೆತದ್ದು ಮಾತ್ರವಲ್ಲದೇ ಅದಕ್ಕಿಂತಲೂ ಮುಖ್ಯವಾಗಿ ಅದು ಪಾದ್ರಿಗಳಿಗೆ "ಮತ ಪ್ರಚಾರಕ್ಕೆ ಬೈಬಲ್ಲು ಏಸು ಕ್ರಿಸ್ತರಿಗಿಂತಲೂ ಬೈಸಿಕಲ್ಲೇ ಹೆಚ್ಚು ಪ್ರಭಾವಶಾಲಿ"[7] ಎಂದು ತಿಳಿಸಿಕೊಟ್ಟಿತು.

ಮಲೆನಾಡಿನ ಪ್ರದೇಶದಲ್ಲಿ ರೆವರೆಂಡ್ ಲೇಕ್‌ಹಿಲ್ ಪಾದ್ರಿಗಳು ಮತ್ತು ತೀರ್ಥಹಳ್ಳಿಯ ಪಾದ್ರಿ ಜೀವರತ್ನಯ್ಯ ಮುಂತಾದವರು ಹಿಂದೂ ಸಮಾಜವನ್ನು ಕ್ರೈಸ್ತ ಸಮಾಜವನ್ನಾಗಿ ಪರಿವರ್ತಿಸುವ ಪ್ರತ್ಯಕ್ಷ ಮತ್ತು ಪರೋಕ್ಷ ಹುನ್ನಾರದಲ್ಲಿದ್ದಾಗ ಮುಕುಂದಯ್ಯ ಮುಂತಾದ ವಿಚಾರವಂತರು ಅದನ್ನು ವಿರೋಧಿ ಸುತ್ತಾರೆ. ಮಾತಿನಲ್ಲಿ ತಮ್ಮ ಸಂಪ್ರದಾಯ, ಸಂಸ್ಕೃತಿಯನ್ನು ಬಿಟ್ಟುಕೊಡಲು ಅಲ್ಲಿನ ಅನಕ್ಷರಸ್ಥ ಅನಾಗರೀಕ ಜನರೇ ಸಿದ್ಧರಿಲ್ಲವೆಂಬುದು ಸ್ಪಷ್ಟವಾಗುತ್ತದೆ. ತನ್ಮೂಲಕವಾಗಿ ಕುವೆಂಪುರವರು ಆದರ್ಶ ಪ್ರಾಯವಾದ ಸನಾತನ ಸಂಸ್ಕೃತಿಯಲ್ಲಿನ ಕುರುಹುಗಳಿಂದ ಒಡಮೂಡಿದ ತಮ್ಮತನದ ಸಮಾಜವನ್ನು ಪರಿಚಯಿಸುತ್ತಾರೆ. ದೇವಯ್ಯ, ಸಿಂಧುವಳ್ಳಿ ಚಿನ್ನಪ್ಪ ಮುಂತಾದ ಬೆರಳೆಣಿಕೆಯ ಜನರು ಮಾತ್ರ ಇದಕ್ಕೆ ಹೊರತಾಗುತ್ತಾರೆ. ಸ್ವಂತಃ ದೇವಯ್ಯನಂತವನಿಗೂ ಅನ್ಯಧರ್ಮ ಸೇರುವ ಶೌರ್ಯ ಒಗ್ಗದಾಗಿರುತ್ತದೆ

ಯಾದರೂ ಬಲವಂತಕ್ಕೆ ಒಪ್ಪಿಕೊಂಡು ಅನಂತರ ಅದರಿಂದ ಹೇಗೆ ಬಿಡಿಸಿಕೊಳ್ಳಬೇಕೆಂದು ಒದ್ದಾಡುತ್ತಿರುತ್ತಾನೆ.

ತೀರ್ಥಹಳ್ಳಿಯ ಪಾದ್ರಿ ಜೀವರತ್ನಯ್ಯನು ದೇವಯ್ಯನನ್ನು ಮಾತ್ರವಲ್ಲದೇ ಆತನ ಗಾಡಿಯಾಳು ಬಚ್ಚನನ್ನು ಮತಾಂತರಗೊಳಿಸಿದ ವಿಚಾರವನ್ನು ಆತನೇ ಹೇಳುವ ಪರಿ ಇದು. 'ಆವತ್ತು ತೀರ್ಥೋಳ್ಳಿಗೆ ಗಾಡಿ ಹೊಡ್ಕೊಂಡು ಹೋದಾಗ ಪಾದ್ರಿಗಳು ಹೇಳಿದ್ರು 'ತೀರ್ಥ ತಗಾ ಅಂತಾ ಎಂಥದೊ ಒಂದಿಷ್ಟು ನೀರು ಹೂಯ್‌ದ್ರು ನನ್ನ ಕೈಗೆ. ಆ ಪಾದ್ರಿ ಪುಸ್ತಗ ತಗೊಂಡು ಏನೇನೋ ಓದಿದ್ರು. ನೀನಿನ್ನು ಕಿಲಿಸ್ತರ ಆದೆ ಅಂದ್ರು. ನಿನ್ನ ಹೆಸರು ಜಕ್ರಪ್ಪಯ್ಯ ಅಂದ್ರು. ನೀನಿನ್ನ ಹೊಲೆಯರವ ಅಲ್ಲ. ಬಿರಾಂಬ್ರ ಮನಿಗಾಗ್ಲಿ ಗೌಡ್ರ ಮನಿಗಾಗ್ಲಿ ಹೋದ್ರೆ ಅಂಗಳದಾಗೆ ನಿಂತ್ಕೊಬೇಡಾ. ಜಗಲಿಗೆ ಹೋಗಿ ಕೂತ್ಕ ಅಂದ್ರು. ಸಣ್ಣ ಗೌಡ್ರುಗೆ ಮೆಗ್ರೋಳ್ಳಿ ಇಸ್ಕೂಲಿನಾಗೆ ತೀರ್ಥ ಕೊಡತಾರಂತೆ ದೊಡ್ಡ ಪಾದ್ರಿ ಅದಾರಲ್ಲ ಆ ಬಿಳಿ ಪಾದ್ರಿ ಅವರೆ ಸೀಮೊಗ್ಗಾದಿಂದ ಬಂದು ಅವರನ್ನು ತಂಜಾತಿಗೆ ಸೇರ್ಕ್ಕೋತಾರಂತೆ.'[3] ಬಚ್ಚಾ ಹೇಳಿದ ಮಾತುಗಳು ದೇವಯ್ಯ ಇನ್ನೂ ಮತಾಂತರಗೊಂಡಿಲ್ಲವೆಂದು ಪ್ರತಿಪಾದಿಸುತ್ತದೆ. ಪಾದ್ರಿಗಳ ಮಾತಿನಲ್ಲಿ ನಮ್ಮ ವೈದಿಕ ಸಂಸ್ಕೃತಿಯ ಅನಾಚಾರಗಳನ್ನು ನಿಂದಿಸುವ ಮಾತುಗಳಿದ್ದು, ದಲಿತರಿಗೆ, ಅಸ್ಪೃಶ್ಯರಿಗೆ ನೈತಿಕ ಧೈರ್ಯವನ್ನು ನೀಡಿ ಅವರನ್ನು ಸಮಾನರಾಗಿಸುವಂತೆ ಮಾಡುವ ಪ್ರಯತ್ನವಿದೆಯೆಂದು ನಂಬಬಹುದಾದರೂ ಬಚ್ಚ ನಂತಹ ನಿರಕ್ಷರ ಕುಕ್ಷಿಗಳನ್ನು, ದಲಿತರನ್ನು ಮತ್ತೊಂದು ಮತದ ಹಸ್ತಾಮೃತ ತೋರಿಸುವಂತೆ ಮಾಡಿ ತನ್ನ ಸಮಾಜದ ವರ್ಗವಿರೋಧಗಳನ್ನು ಕಟ್ಟಿಕೊಳ್ಳುತ್ತಾ ಹಾಗೂ ತನ್ನ ರಾಜ್ಯಕ್ಕೆ (ಸಂಸ್ಕೃತಿಗೆ) ಅದೇ ಸೈನ್ಯವನ್ನು ಎತ್ತಿಕಟ್ಟಿದಂತಾಗುವುದಿಲ್ಲವೇ.

ಪಾದ್ರಿಯ ಮಗಳಾದ ಜ್ಯೋತಿರ್ಮಣಿಯಮ್ಮನ ಜೊತೆ ಬೆಟ್ಟಳ್ಳಿ ದೇವಯ್ಯಗೌಡರ ಪ್ರಣಯ ವ್ಯವಹಾರ ದೇಹ ಸಂಬಂಧದವರೆಗೂ ನಡೆದಿತ್ತು. ಆದರೆ ಕ್ರೈಸ್ತನಾದ ಪಾದ್ರಿ ಈ ಯುವಕನನ್ನು ಕ್ರೈಸ್ತ ಮತಕ್ಕೆ ಸೆಳೆಯಲು ತನ್ನ ಮಗಳನ್ನು ಒಂದು ಅಸ್ತ್ರವನ್ನಾಗಿಸಿಕೊಂಡಿದ್ದನು. ಆಗ ದೇವಯ್ಯನಿಗೆ ತಾನು ಎಂತಹ ಅಪಾಯಕರ ಪರಿಸ್ಥಿತಿಯೆಡೆಗೆ ನಡೆಯುತ್ತಿದ್ದೇನೆ ಎಂದು ಅರಿವಾಗತೊಡಗಿತು. ಆದ್ದರಿಂದ ನನ್ನ ಹೆಂಡತಿ ಕ್ರೈಸ್ತಳಾಗಲು ಎಂದಿಗೂ ಒಪ್ಪುವುದಿಲ್ಲ. ಆದ್ದರಿಂದ ನಾನು ಹೇಗೆ ಕ್ರೈಸ್ತನಾಗಲಿ ಎಂದು ದೇವಯ್ಯ ಹೇಳಿದ್ದಕ್ಕೆ, ಪಾದ್ರಿ ಕ್ರೈಸ್ತಮತ ಇಬ್ಬರು ಹೆಂಡಿರನ್ನು ಆಗಲು ಎಂದಿಗೂ ಸಮ್ಮತಿಸುವುದಿಲ್ಲ. ಆದರೆ ಮೊದಲ ಹೆಂಡತಿಯನ್ನು ಕಾನೂನು ಬದ್ಧವಾಗಿ ಡೈವೋರ್ಸ್ ಮಾಡಬಹುದು ಎಂದು ಸೂಚಿಸಿದನು.

ಇಲ್ಲಿ ಪಾದ್ರಿ ಜೀವರತ್ನಯ್ಯ ತನ್ನ ಮಗಳ ಕನ್ಯತ್ವ ಹರಣಕ್ಕೆ ಕಾರಣನಾದ ದೇವಯ್ಯನನ್ನು ಮತಾಂತರಗೊಳಿಸಿ ಕ್ರಿಸ್ತಿಯನ್ನನಾಗಿ ಮಾಡಬೇಕೆಂಬ ಮಹದಾಸೆಯ ಜೊತೆಗೆ ಬಂಗಾರದಂತಹ ಬಾಳಿನ ದೇವಯ್ಯ ರಂಗಮ್ಮರ ಸಂಸಾರಕ್ಕೆ ಕೊಳ್ಳಿ ಇಟ್ಟು ಅವರನ್ನು ವಿಚ್ಛೇದನಗೊಳಿಸಿ, ಬದುಕನ್ನು ಮುರಿಯುವ

ಮನಸ್ಥಿತಿಯನ್ನು ಹೊಂದುತ್ತಾನೆ. ಇದನ್ನು ಸುಧಾರಣೆ ಎನ್ನಬೇಕೆ? ಅಥವಾ ಹೊಸದೊಂದು ಶ್ರೇಷ್ಠ ಧರ್ಮ ಇದನ್ನು ಪ್ರತಿಪಾದಿಸುತ್ತದೆಯೇ? ಎಂಬ ಪ್ರಶ್ನೆ ಎದುರಾಗುತ್ತದೆ.

ದೇವಯ್ಯ ಕಾಲ ವಂಚನೆ ಮಾಡಿ ತಪ್ಪಿಸಿಕೊಳ್ಳಬಹುದೆಂದು ಆಲೋಚಿಸಿ, ಮೈಸೂರು ಸಂಸ್ಥಾನ ದಲ್ಲಿ ಆಗ ಇದ್ದ ಕಾನೂನೊಂದನ್ನು ಪಾದ್ರಿಯ ಗಮನಕ್ಕೆ ತಂದನು. ಬ್ರಿಟಿಷರ ಆಳ್ವಿಕೆ ಕಾಲದಲ್ಲಿ ಹಿಂದು ಅವಿಭಕ್ತ ಕುಟುಂಬದಲ್ಲಿ ಒಬ್ಬ ಅನ್ಯ ಮತಾವಲಂಬಿಯಾದರೆ ಅವನು ಪಿತ್ರಾರ್ಜಿತ ಆಸ್ತಿಯ ಹಕ್ಕು ಕಳೆದುಕೊಳ್ಳಬೇಕಾಗಿತ್ತು. ಸಿಂಧುವಳ್ಳಿ ಚಿನ್ನಪ್ಪಗೌಡರು ಮತಾಂತರ ಹೊಂದುವಾಗ ಅವರೊಬ್ಬರೇ ಪಿತ್ರಾರ್ಜಿತ ಆಸ್ತಿಗೆ ಏಕಮಾತ್ರ ಹಕ್ಕುದಾರರಾಗಿರುವುದರಿಂದ ಅವರಿಗೆ ಆಸ್ತಿಯ ಬಗ್ಗೆ ಲವಲೇಷದ ಸಮಸ್ಯೆಯೂ ಇರಲಿಲ್ಲ. ಆದರೆ ದೇವಯ್ಯನ ತಂದೆ ಕಲ್ಲಯ್ಯಗೌಡರು ಇರುವವರೆಗೆ ಕ್ರೈಸ್ತನಾಗುವ ತನಗೆ ಆಸ್ತಿ ಬರುವುದಿಲ್ಲ. ಆದ್ದರಿಂದ ಅವರು ಪರಲೋಕ ಪ್ರಾಪ್ತನಾದ ಮೇಲೆ ನಾನು ಮತಾಂತರವಾಗುತ್ತೇನೆ ಎಂದು ದೇವಯ್ಯ ವಾದಿಸತೊಡಗಿದನು. ಅದಕ್ಕೆ ಪಾದ್ರಿಯ ಸಮಾಧಾನದ ಹಿತನುಡಿ ಹೇಗಿತ್ತೆಂದರೆ, ಬ್ರಿಟೀಷ್ ಚಕ್ರವರ್ತಿನಿಯೂ ಪ್ರೊಟಸ್ಟೆಂಟ್ ಕ್ರೈಸ್ತ ಮತದವಳೇ ಆದ್ದರಿಂದ ಇಂಡಿಯಾದಲ್ಲಿ ಬ್ರಿಟೀಷ್ ಸರ್ಕಾರವು ಪ್ರೊಟಸ್ಟೆಂಟ್ ಮಿಷನರಿಗಳಿಗೆ ನೇಟೀವ್ ಜನರನ್ನು ಮತಾಂತರಗೊಳಿಸುವುದಕ್ಕೆ ಸರ್ವಾಧಿ ಕಾರವನ್ನು ಸರ್ವಸೌಲಭ್ಯವನ್ನು ಕೊಡುತ್ತಾ ಬಂದಿದೆ. ಮೈಸೂರು ಸಂಸ್ಥಾನವು ನೇಟೀವ್ ಸಂಸ್ಥಾನ ವಾದರೂ ಅದರ ರಾಜನು ಸಂಪೂರ್ಣವಾಗಿ ಬ್ರಿಟೀಷ್ ಸಾಹೇಬರು ಹೇಳಿದ ಹಾಗೆ ಕೇಳಲೇ ಬೇಕಾಗುತ್ತದೆ. ನಮ್ಮ ದೊಡ್ಡ ಪಾದ್ರಿಗಳು ರೆವರೆಂಡ್ ಲೇಕ್‌ಹಿಲ್ ದೊರೆಗಳು. ಅವರು ರೆಸಿಡೆಂಟರ ಕಿವಿಯಲ್ಲಿ ಒಂದು ಪಿಸುಮಾತು ಉಸಿರಿದರೂ ಸಾಕು ನಿಮ್ಮ ಪಿತ್ರಾರ್ಜಿತ ಆಸ್ತಿಗೆ ನಿಮ್ಮ ಅರ್ಧಾಂಗಿ ಆಗುವ ನನ್ನ ಮಗಳು ಹಕ್ಕುದಾರಳಾಗುತ್ತಾಳೆ. ಪಾದ್ರಿಯ ಮಾತಿನ ಮರ್ಮವೇನೆಂದರೆ ಮೈಸೂರು ಸಂಸ್ಥಾನದ ಅಡಿಯಾಳುತನ, ಬ್ರಿಟೀಷ್ ಚಕ್ರಾಧಿಪತ್ಯ ನಮ್ಮ ಸಮಾಜ ಮತ್ತು ಪ್ರಭುತ್ವದ ಮೇಲೆ ಬೇಕಾ ಬಿಟ್ಟಿಯಾಗಿ ಸ್ಥಾಪಿಸಿದ ಅಧಿಕಾರ, ಕಾರಣ ಸಿಕ್ಕರೆ ಅದು ಹೇಗೆ ಬೇಕಾದರು ಕಾನೂನನ್ನು ಬದಲಾಯಿಸು ತ್ತದೆ. ನಿಮ್ಮ ಪಿತ್ರಾರ್ಜಿತ ಆಸ್ತಿಯೂ ನಿಮ್ಮ ಕೈಸೇರದಂತೆ ಮಾಡುವ ಅಧಿಕಾರ ನಮಗಿದೆ ಎಂಬುದು.

ಅನಂತರ ಜೀವರತ್ನಯ್ಯ ತನ್ನ ಮಗಳ ಸ್ವಾರ್ಥಪರತೆಯ ಕಾರಣದಿಂದ ದೇವಯ್ಯನನ್ನು ರೆವರೆಂಡ್ ಲೇಕ್‌ಹಿಲ್ ಪಾದ್ರಿಗಳ ಸಮ್ಮುಖದಲ್ಲಿ ಶಾಲೆಯ ಆರಂಭೋತ್ಸವದ ದಿನ ಮತಾಂತರಗೊಳಿಸ ಬೇಕೆಂದು ನಿಶ್ಚಯಮಾಡಿಕೊಂಡಿದ್ದನು. ಶಾಲೆಯ ಆರಂಭೋತ್ಸವದ ದಿನ ಪಿಟೀಲು ಕೊಯ್ದು ಪ್ರಾರ್ಥನೆ ನಡೆಸುತ್ತಿದ್ದ ಉಪದೇಶಿ ಜೀವರತ್ನಯ್ಯ ಬೆಳಕಂಡಿಯ ಕಡೆ ನೋಡುತ್ತಾರೆ. ಒಂದು ಕೋವಿ ನಳಿಗೆಯು ತಮ್ಮ ಕಡೆಗೆ ತೂರಿಬರುತ್ತಿದೆ. ಏಸುಕ್ರಿಸ್ತ ಬೈಬಲ್ಲು, ಕ್ರೈಸ್ತ ಮತ, ಧರ್ಮಪ್ರಚಾರ, ಉಪದೇಶತ್ವ, ಪಾದ್ರಿತ್ವ ಇತ್ಯಾದಿಯಾದ ಎಲ್ಲಾ ಮನುಷ್ಯತ್ವದ ಉಪಾದಿಗಳು ತಟಕ್ಕನೆ ಕಳಚಿಬಿದ್ದು ಬತ್ತಲೆ ನಿಂತಂತಾಯಿತು.

'ಬದುಕಿದರೆ ಬೆಲ್ಲ ತಿಂದೇನು' ಎಂಬಂತೆ ಹೌಹಾರಿ ಪೀಟಿಲನ್ನು ಸುವಾರ್ತೆಯನ್ನು ಹೊತ್ತು ಹಾಕಿ ಅವಿತುಕೊಳ್ಳಲು ಮೂಲೆಗೆ ಓಡಿದರು. ಪಾದ್ರಿ ಜೀವರತ್ನಯ್ಯ ರೆವರೆಂಡ್ ಲೇಕ್‌ಹಿಲ್ ಸಾಹೇಬರು ಈ ಘಟನೆಯಿಂದ ತಬ್ಬಿಬ್ಬಾದರು. ತಾವು ಯಾವ ಜನರ ಜೀವನದ ಜೊತೆ ಆಟವಾಡುತ್ತೇವೋ ಆ ಜನರೇ ಈಗ ನಮ್ಮ ಪ್ರಾಣದ ಜೊತೆ ಆಟವಾಡುತ್ತಿದ್ದಾರೆಂದು ಭಯವಾಯಿತು. ಮುಕುಂದಯ್ಯ, ದೇವಯ್ಯನನ್ನು ಮತಾಂತರಗೊಳಿಸಲು ತಾನು ಬಿಡಲಾರೆನೆಂದು ಹೆದರಿಸಿದಾಗ, ರೆವರೆಂಡರು ಸದ್ಯ ಅಪಾಯದಿಂದ ಪಾರಾದರೆ ಸಾಕೆಂದು ಹೀಗೆ ಹೇಳುತ್ತಾರೆ. 'ನಾವೇನು ನಿಮ್ಮನ್ನು ಬಲಾತ್ಕಾರವಾಗಿ ಕ್ರಿಸ್ತಮತಕ್ಕೆ ಸೇರಿಸುತ್ತಿಲ್ಲ. ನಿಮ್ಮ ಇಷ್ಟದ ಮೇರೆಗೆ ಹಾಗೆ ಮಾಡಿದ್ದೇವೆ. ನೀವು ನಿಮ್ಮ ಹೆಂಡತಿಯನ್ನು ಒಪ್ಪಿಸದಿದ್ದರೆ ಅದು ನಿಮ್ಮ ತಪ್ಪು. ಈ ವಿಷಯ ನಮಗೆ ಮೊದಲೇ ಗೊತ್ತಾಗಿದ್ದರೆ ನಾವೂ ನಿಮ್ಮನ್ನು ಮತಾಂತರಗೊಳಿಸಲು ಬರುತ್ತಿರಲಿಲ್ಲ. ಕ್ರಿಸ್ತರಿಗೆ ನಿಮ್ಮ ಕುಟುಂಬವನ್ನು ನಾಶಗೊಳಿಸುವ ಉದ್ದೇಶ ಎಂದಿಗೂ ಇರುವುದಿಲ್ಲ. ಕರಿಪಾದ್ರಿಯ ಕಡೆ ತಿರುಗಿ ಉಪದೇಶಿಗಳೇ ನೀವು ಮೊದಲೇ ಚೆನ್ನಾಗಿ ಅದನ್ನು ಅರಿಯಬೇಕಿತ್ತು. ಹೋಗಿ ದೇವಯ್ಯಗೌಡರ ಭಾವನಿಗೆ ಹೇಳಿ ನಾವು ಯಾರನ್ನೂ ಬಲಾತ್ಕಾರವಾಗಿ ಕ್ರೈಸ್ತಮತಕ್ಕೆ ಸೇರಿಸಿಕೊಳ್ಳುವುದಿಲ್ಲ ಎಂದು.'[3]

ಪಾಪ ರೆವರೆಂಡ್ ಸಾಹೇಬರಿಗೆ ಹೇಗೆ ತಾನೆ ಗೊತ್ತಾಗಬೇಕು? ಏಸುಕ್ರಿಸ್ತ, ಮತ, ಧರ್ಮ, ಪರಲೋಕ, ದೇವರು ಇವು ಯಾವುದಕ್ಕೂ ಸಂಬಂಧ ಪಡದ ಪಾದ್ರಿಯ ಮತ್ತು ಪಾದ್ರಿಯ ಮಗಳ ಹಾಗೂ ದೇವಯ್ಯಗೌಡರ ಅಂತರಂಗಿಕವೂ ಶುದ್ಧ ಲೌಕಿಕವೂ ಆಗಿದ್ದ ಗುಪ್ತ ವ್ಯವಹಾರದ ಜಟಿಲತೆ. 'ಉಪದೇಶಿಗಳೆ ಕ್ರಿಸ್ತ ಸ್ವಾಮಿಯ ಸಂದೇಶವನ್ನು ಕ್ರಿಸ್ತೋಚಿತವಲ್ಲದ ವಿಧಾನಗಳಿಂದ ಪ್ರಚಾರ ಮಾಡಲು ನೀವು ಹೊರಟಿದ್ದೇ ಆದರೆ ಜನರನ್ನು ಮೈಮೇಲೆ ಹಾಕಿಕೊಂಡು ಕಷ್ಟ ಅನುಭವಿಸಬೇಕಾಗುತ್ತದೆ. ನಮ್ಮ ಸ್ವಾರ್ಥ ಉದ್ದೇಶಗಳನ್ನು ತ್ಯಜಿಸಿ ಸತ್ವಮಾರ್ಗದಿಂದ ಮುಂದುವರಿದು ಜನರ ನಂಬಿಕೆಗೆ ಪಾತ್ರರಾಗಬೇಕು. ಅವರ ವಿಶ್ವಾಸ ಲಭಿಸಿದ ತರುವಾಯವೇ ಅವರು ನಮ್ಮ ಉಪದೇಶಕ್ಕೆ ಕಿವಿಗೊಡುತ್ತಾರೆ. ಔಷಧಿ, ಉಪಚಾರ, ವಿದ್ಯಾಭ್ಯಾಸ ಮೊದಲಾದ ಸಹಾಯದ ಮೂಲಕ ಅವರ ಹೃದಯವನ್ನು ನಾವು ಗೆಲ್ಲಬೇಕು. ಅವರ ಮತೀಯ ಮೌಢ್ಯಗಳಿಂದ ಆಗುತ್ತಿರುವ ಅಪಾಯಗಳನ್ನು ಉಪಾಯವಾಗಿ ಅವರಿಗೆ ಅರ್ಥವಾಗುವಂತೆ ಮಾಡಬೇಕು' ಎಂದೆಲ್ಲ ಉಪದೇಶಿಗೆ ಉಪದೇಶ ಮಾಡಿ, 'ಮುಕುಂದಯ್ಯನಿಗೆ ನಾವು ಯಾವುದೇ ಅಧರ್ಮದ ಕಾರ್ಯವನ್ನು ಮಾಡುತ್ತಿಲ್ಲ. ಸಾಮಾಜಿಕ ಶೋಷಣೆಯನ್ನು ತಪ್ಪಿಸಿ, ಜನರ ಜೀವನದ ಉದ್ಧಾರಕ್ಕಾಗಿ ಶ್ರಮಿಸುತ್ತೇವೆ' ಎಂದು ವರ್ಣಿಸುವ ಪ್ರಯತ್ನ ಮಾಡುತ್ತಾರೆ. ಇಲ್ಲಿ ಕ್ರೈಸ್ತ ಧರ್ಮದ ಉದ್ಧಾರ ಸೂತ್ರಗಳನ್ನು ಎಲ್ಲಾ ಸಮಾಜಗಳಿಗೂ ಅನ್ವಯಿಸಿ ಲೋಕ ಕಲ್ಯಾಣವನ್ನು ಸಾಧಿಸಿಬಿಡುತ್ತೇವೆ ಎಂಬ ಭಾವನೆ ಇದ್ದಂತಿದೆ. ಅವರು ಮುಂದುವರಿದು 'ನೀವು ಕ್ರೈಸ್ತ ಧರ್ಮಕ್ಕೆ ಸೇರಿ ಅಥವಾ ಬಿಡಿ ಆದರೆ ಕ್ರೈಸ್ತ ಧರ್ಮದ ಉದಾರ ತತ್ವಗಳನ್ನು, ಸೇವಾ ಮನೋಧರ್ಮವನ್ನು, ಸರ್ವ

ಸಮಾನತಾ ದೃಷ್ಟಿಯನ್ನು, ಉನ್ನತ ಆದರ್ಶಗಳನ್ನು, ನಿಮ್ಮ ಮಾರ್ಗದರ್ಶನ ಜ್ಯೋತಿಯನ್ನಾಗಿ ಮಾಡಿಕೊಂಡು, ಸಾಮಾಜಿಕ ಸಂಕೋಲೆಗಳಿಂದ ಬಿಡಿಸಿಕೊಳ್ಳುವುದು ಮಾತ್ರ ನಿಮಗೆ ಅತೀ ಅವಶ್ಯಕವಾಗಿದೆ. ಆ ದಾರಿಯಲ್ಲಿ ಮುಂದುವರಿಯಲು ನಾವು ನಿಮಗೆ ಸಹಾಯ ಮಾಡಲು ಸಿದ್ಧರಿದ್ದೇವೆ. ಈ ದಿನ ಸಾಯಂಕಾಲ ನಡೆಯಲಿರುವ ಸ್ಕೂಲಿನ ಪ್ರಾರಂಭೋತ್ಸವ ಆ ದಿಕ್ಕಿನಲ್ಲಿ ನಮ್ಮ ಮಿಷನ್ ಇಡುವ ಮೊದಲ ಹೆಜ್ಜೆ. ನಿಮ್ಮ ಜನರೆಲ್ಲ ಅದರಲ್ಲಿಯೂ ಮುಕುಂದಯ್ಯ ದೇವಯ್ಯನಂತಹ ಮುಂದಾಳು ಯುವಕರು ಮುಂದೆ ಬಂದು ನಮ್ಮೊಡನೆ ಸಹಕರಿಸುತ್ತಾರೆಂದು ನಾನು ನಂಬಿದ್ದೇನೆ. ಸರ್ಕಾರದ ವಿದ್ಯಾಭ್ಯಾಸ ಇಲಾಖೆಯಿಂದ, ನಮ್ಮ ಮಿಷಿನ್‌ನ ಕಡೆಯಿಂದ ನಿಮಗೆ ಬೇಕಾದ ನೆರವು ಒದಗಿಸುವಂತೆ ನಾವು ಪವಿತ್ರಾತ್ಮ ಏಸುವಿನ ಹೆಸರಲ್ಲಿ ಕಂಕಣ ಬದ್ದರಾಗಿದ್ದೇವೆ' ಎಂದು ರೆವರೆಂಡ್ ಪಾದ್ರಿಗಳು ಉದ್ದುದ್ದಾ ಭಾಷಣ ಮಾಡುತ್ತಾರೆ. ವಿದ್ಯಾಭ್ಯಾಸದ ಮೂಲಕ ವೈದಿಕ ಸಮಾಜವನ್ನು ಉದ್ಧಾರ ಮಾಡುವ ಬದಲು, ಬೆಳೆಯುವ ಮಕ್ಕಳಿಗೆಲ್ಲ ಶಿಕ್ಷಣದ ಹೆಸರಿನಲ್ಲಿ ಧರ್ಮವನ್ನು ಪೋಷಿಸುವ ನಿಷ್ಠೆ ಮತ್ತು ಗುರಿ ಈ ಬಿಳಿ ಪಾದ್ರಿಯಲ್ಲಿಯೂ ಇದೆ. ಅನ್ನ ವಸ್ತ್ರಾದಿಗಳಿಂದ ವಂಚಿತರಾದ ನಮ್ಮ ಸಮಾಜದ ಜನರಿಗೆ ಶಿಕ್ಷಣ ಅದಕ್ಕಿಂತಲೂ ಮುಖ್ಯವಾದುದು ಎಂದು ತೋರಲಾರದು. ತುತ್ತಿನ ಚೀಲ ತುಂಬಲು ಪರಿಪಾಟಲು ಬೀಳುವ ಐತ, ಅಕ್ಕಣಿ, ಗುತ್ತಿ, ತಿಮ್ಮಿ, ಗಂಗ, ಪುಟ್ಟ ಮುಂತಾದ ಅಸ್ಪೃಶ್ಯ ಜೀತದಾಳುಗಳು, ಶಿಕ್ಷಣಕ್ಕೆ ಹೇಗೆ ತಾನೆ ಮಹತ್ವ ಕೊಟ್ಟಾರು? 'ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂವಿನಂತೆ' ಶೋಷಿತ ಸಮಾಜಕ್ಕೆ ಧರ್ಮ, ಅದರ ಸಾರದ ಶ್ರೇಷ್ಠತೆ ಹೇಗೆತಾನೆ ರುಚಿಸಬಲ್ಲದು?

ಕ್ರೈಸ್ತ ಧರ್ಮೀಯ ಮತಾಂತರದ ಉದ್ದೇಶ ಒಂದು ಕಡೆಯಾದರೆ ನಮ್ಮ ಸಮಾಜವನ್ನು ಧಾರ್ಮಿಕವಾಗಿ ಹಾಗೂ ಆರ್ಥಿಕವಾಗಿ ನಷ್ಟಕ್ಕೆ ಗುರಿಮಾಡಿದೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಕಂಡುಬರುವ ಕರೀಂ ಸಾಬು (ಕರಿಮೀನು ಸಾಬು) ಪುಡಿಸಾಬು, ಇಜಾರದ ಸಾಬು, ಲುಂಗಿ ಸಾಬು ಅಜೀಜ್ ಸಾಬು (ಅಜ್ಜಿ ಸಾಬು) ಮುಂತಾದ ಮುಸ್ಲಿಂ ಸಮುದಾಯದವರು ಕಲ್ಲೂರು ಮಂಜಭಟ್ಟರ ವಸೂಲಿ ಸಾಬರಾಗಿ ನೇಮಕಗೊಂಡು ಶೋಷಿತ ಸಮಾಜವನ್ನು ಮತ್ತಷ್ಟು ಶೋಷಣೆ ಮಾಡಲು ಮುಂದಾಗುತ್ತಾರೆ. ಅವರ ದರ್ಪಗಳಿಗೆ ಕೊನೆಯೇ ಇಲ್ಲ. ಕಂಡ ಕಂಡವರ ಸಂಪತ್ತನ್ನು ಲೂಟಿ ಮಾಡುವುದು. ಕಳ್ಳತನ, ಕೊಲೆ, ಹಿತ್ತಲ ಬಾಗಿಲಿಂದ ಗೌಡರ ಮನೆಯ ಹೆಂಗಸರಿಂದ ಅಡಿಕೆ ಜಪ್ತಿ ಮಾಡುವುದು, ಸುಮ್ಮ ಸುಮ್ಮನೆ ತಾವೇ ಸ್ವಯಂ ಘೋಷಿತರಾಗಿ ವಸೂಲಿಗೆ ನಿಂತುಬಿಡುವುದು ಮುಂತಾದ ಅನಾಚಾರಗಳಿಗೆ ಹೆಸರಾಗಿರುತ್ತಾರೆ. ಅಷ್ಟೆ ಅಲ್ಲದೇ 'ಹೊನ್ನಾಳಿ ಹೊಡ್ತಾ' ಎಂಬ ಶಿಕ್ಷೆಯ ಪ್ರಯೋಗಕ್ಕೆ ಈ ಜನರು ಹೆಸರಾಗಿದ್ದರು.

೧೯ನೇ ಶತಮಾನದ ಕೊನೆಯಲ್ಲಿ ಆಗುಂಬೆ, ಮೇಗರವಳ್ಳಿ, ತೀರ್ಥಹಳ್ಳಿ, ಮುತ್ತೂರು, ಮುಂಡಾಕಾರು, ಮಂಡಗದ್ದೆ ಮುಂತಾದ ಕಡೆಯ ಮಲೆನಾಡಿನ ಹಳ್ಳಿಗರಿಗೆಲ್ಲರಿಗೂ ಹೊನ್ನಾಳಿ ಹೊಡ್ತದ ಅರ್ಥ ಚೆನ್ನಾಗಿಯೇ ಗೊತ್ತಿತ್ತು. ಹಲವರಿಗೆ ಅದರಲ್ಲು ಬಡಬಗ್ಗರಿಗೆ ಅದರ ರುಚಿಯೂ ಗೊತ್ತಾಗಿತ್ತು. ಹೊನ್ನಳ್ಳಿ ಹೊಡ್ತದ ಮೂಲ ಪಿತಾಮಹರೆಂದರೆ ಕಲ್ಲೂರು ಸಾಹುಕಾರ ಮಂಜಭಟ್ಟರು. ಮಂಜಭಟ್ಟರಿಗೆ ಆರ್ಥಿಕವಾಗಿ ಶಕ್ತಿ ಇದ್ದರೂ ದೈಹಿಕವಾಗಿ ಅಶಕ್ತರಾಗಿದ್ದರು. ಆದ್ದರಿಂದ ತಾವು ಕೊಟ್ಟ ಸಾಲವನ್ನು ಬಡ್ಡಿಯನ್ನು ವಸೂಲಿ ಮಾಡಲು ಹೊನ್ನಾಳಿಯ ಹುಂಡಾಡಿಗಳಾದ ಪುಂಡ ಸಾಬರನ್ನು ಕರೆಸುತ್ತಿದ್ದರು. ಮೇಗರವಳ್ಳಿಯ ಕರಿಮೀನು ಸಾಬು ಮತ್ತು ಅವನ ತಮ್ಮ ಪುಡಿಸಾಬುವಿನ ಮೂಲಕ ಹೊನ್ನಾಳಿ ಬಂಡರನ್ನು ಕರೆಸಿ ವಸೂಲಿ ಸಾಬರಾಗಿ ನೇಮಿಸಿಕೊಂಡಿದ್ದನು. ಈ ಸಾಬರ ತಂಡದಲ್ಲಿ ಐದು ಹೆಸರುಗಳು ಎಲ್ಲಾ ಜನರಿಗೂ ತಿಳಿದಿತ್ತು. ಅವರೆಂದರೆ ಕರೀಮೀನು ಸಾಬು, ಪುಡಿಸಾಬು, ಅಜ್ಜಿಸಾಬು, ಲುಂಗಿಸಾಬು, ಇಜಾರದ ಸಾಬು. ಕರೀಂಸಾಬು ಎಂಬ ಹೆಸರು ಹಳ್ಳಿಯವರ ಬಾಯಿಯಲ್ಲಿ ಕರಿಮೀನು ಸಾಬು ಎಂದಾಯಿತು. ಇವನು ಮೇಗರವಳ್ಳಿಯಲ್ಲಿ ಒಂದು ಅಂಗಡಿಯನ್ನು ಇಟ್ಟುಕೊಂಡು ನಡೆಸುತ್ತಿದ್ದನು. ಇವನ ತಮ್ಮ ಮಂಗಳೂರು ನಶ್ಯ ತಯಾರಿಸಿ ಮಾರುತ್ತಿದ್ದ ಕಾರಣದಿಂದ ಇವನನ್ನು ಪುಡಿಸಾಬು ಎಂದು ಕರೆಯುತ್ತಿದ್ದರು. ಆಗುಂಬೆಯ ಘಾಟಿ ಕಾಡು ದಾರಿಯಲ್ಲಿ ಆಗುತ್ತಿದ್ದ ಕೊಲೆ ದರೋಡೆಗಳಲ್ಲಿ ಅವನ ಪಾಲು ಇತ್ತೆಂದು ಕೆಲವರು ಆಡಿಕೊಳ್ಳುತ್ತಿದ್ದರು. ಎತ್ತರವಾಗಿ, ದಾಂಢಿಗನಾಗಿ, ಕ್ರೂರವಾಗಿ ಕಾಣುತ್ತಿದ್ದ ಇಜಾರದ ಸಾಬುವಿಗೆ ಅವನು ಹಾಕಿಕೊಳ್ಳುತ್ತಿದ್ದ ದೊಗಳೆ ಷರಾಯಿಯಿಂದಲೇ ಹೆಸರು ಬಂದಿತ್ತು. ಇನ್ನು ಕುಳ್ಳಾಗಿ ಗುಜ್ಜಾಗಿದ್ದ ಸಿಂಡಮೂಗಿನ ಸಾಬು ಯಾವಾಗಲೂ ಸಣ್ಣ ಚೌಕದ ಪಂಚೆಯನ್ನು ಸೊಂಟಕ್ಕೆ ಕಟ್ಟಿಕೊಳ್ಳುತ್ತಿದ್ದ ಕಾರಣ ಅವನಿಗೆ ಲುಂಗಿಸಾಬು ಎಂದು ಹೆಸರು ಬಂದಿತ್ತು. ತೆಳ್ಳಗೆ ಕಡ್ರಗಿದ್ದು ಹೋತದ ಗಡ್ಡ ಬಿಟ್ಟಿದ್ದವನ ನಿಜವಾದ ಹೆಸರು ಅಜೀಜ್ ಎಂದು. ಆದರೆ ಹಳ್ಳಿಗರ ಬಾಯಲ್ಲಿ ಅದು ಅಜ್ಜಿಸಾಬು ಎಂದು ಮರು ನಾಮಕರಣವಾಗಿತ್ತು.

ಕಲ್ಲೂರು ಸಾಹುಕಾರ ಮಂಜಭಟ್ಟರಲ್ಲಿ ಕರಣಿಕನಾಗಿದ್ದ (ಗುಮಾಸ್ತ) ಕಿಟ್ಟೈತಾಳರ ಅಣತಿಯಂತೆ ಈ ಸಾಬರು ವಸೂಲಿಗೆ ಹೊರಡುತ್ತಿದ್ದರು. ಎಷ್ಟೋಸಾರಿ ಯಾರ ಆಣತಿಯೂ ಇಲ್ಲದೆ ತಮ್ಮ ಇಚ್ಛೆಯ ಪ್ರಕಾರ ಸ್ವಂತ ಪ್ರಯೋಜನಕ್ಕಾಗಿ ವಸೂಲಿ ಬೇಟೆಗೆ ಹೊರಡುತ್ತಿದ್ದರು. ಅವರು ಅನಧಿಕೃತವಾಗಿಯೇ ಹೊರಟಾಗಲು ಅಧಿಕೃತವಾಗಿಯೇ ವಸೂಲಿಗೆ ಬಂದಿದ್ದೇವೆ ಎಂದು ಹೇಳಿಕೊಳ್ಳುತ್ತಿದ್ದರು. ಕೆಲವು ಸಾಲದ ಕುಳಗಳು ಆ ಸಾಬರ ಪುಂಡಾಟಿಕೆ ಮತ್ತು ದರ್ಪಗಳಿಗೆ ಹೆದರಿ ಲಂಚದ ರೂಪದಲ್ಲಿ ಅವರಿಗೆ ಅಡಿಕೆ, ಬಾಳೇಕಾಯಿ, ಅಕ್ಕಿ, ಭತ್ತ, ಮೆಣಸಿನಕಾಯಿ ಮುಂತಾದವುಗಳನ್ನು ತೆತ್ತು ಬೀಸೋದೊಣ್ಣೆ ತಪ್ಪಿದರೆ ಸಾಕು ಎಂದು ಅವರನ್ನು ಕಳಿಸುತ್ತಿದ್ದರು. ಈ ರೂಢಿಯೇ ಸಾಬರ ತಲೆಗೆ ಹತ್ತಿ ಅವರು ಪದೇ ಪದೇ ಈ ಕಸುಬಿಗೆ ಕೈ ಹಾಕುತ್ತಿದ್ದರು. ಒಂದು ದಿನ ಈ ಮೂವರು ಸಂಜೆಯ ಹೊತ್ತಿಗೆ ಕಮ್ಮಾರ

ಸಾಲೆಯ ಕಳ್ಳಂಗಡಿಯ ಒಳಗೆ ತಾವು ಕೊಳ್ಳೆ ಹೊಡೆದುದ್ದನ್ನೆಲ್ಲಾ ತುಂಬಿಕೊಂಡು ಬಂದಿದ್ದರು. ಅಜ್ಜಿಸಾಬಿಯ ಕುದುರೆ ತಟ್ಟಿನ ಬೆನ್ನ ಮೇಲೆ ದುರ್ನಾತದ ಚರ್ಮದ ಚೀಲವಿತ್ತು. ಅವು ಹೊಲೆಯರಿಂದ ಸುಲಿದಿದ್ದ ದನದ ಚರ್ಮಗಳು ಮತ್ತು ದೆಯ್ಯದ ಹರಕೆಗಳಲ್ಲಿ, ಹಬ್ಬಗಳಲ್ಲಿ ಇತರ ಜಾತಿಯವರು ಕಡಿದಿದ್ದ ಕುರಿಯ ಚರ್ಮಗಳು. ಲುಂಗಿಸಾಬಿಯ ಚೀಲದಲ್ಲಿ ಹಿತ್ತಲ ಕಡೆಯ ಬಾಗಿಲಲ್ಲಿ ಸ್ವಾರ್ಲು ಮೀನು ಮಾರುವ ನೆಪದಲ್ಲಿ ಅದರ ಬೆಲೆಗೆ ನಾಲ್ಕೈದು ಮಡಿಯ ಬೆಲೆಯ ಕದರಡಿಕೆ, ಮೆಣಸಿನ ಕಾಳುಗಳನ್ನು ಮನೆಯ ಹೆಗ್ಗಡಿತಿಯಮ್ಮರಿಂದ ಸುಲಿದಿದ್ದು ತುಂಬಿತ್ತು. ಇಜಾರದ ಸಾಬಿಯ ಚೀಲದಲ್ಲಿ ಸಾಲದ ಕುಳಗಳಿಂದ ಲಂಚದ ರೂಪದಲ್ಲಿ ಪಡೆದಿದ್ದ ಸಂಪತ್ತು ತುಂಬಿತ್ತು. ಮೂರುಜನರು ಹೆಂಡ ವನ್ನೊ ಸಾರಾಯಿಯನ್ನೋ ಕುಡಿದು ಸುಮ್ಮನೇ ಹೋಗಬಹುದಿತ್ತು. ಆದರೆ ಸಾಬರು ತಮ್ಮ ದೌಲತ್ತು ತೋರಿಸಲು ಹೋಗಿ ವೆಂಕಪ್ಪನಾಯಕರ ಕೈಯಲ್ಲಿ ಏಟು ತಿಂದಿದ್ದರು.

ಬೆಟ್ಟಳ್ಳಿ ಕಲ್ಲಯ್ಯಗೌಡರು ಈ ಹೊನ್ನಾಳಿ ಸಾಬರನ್ನು ಕರೆಸಿ ದೊಡ್ಡಬೀರ ಮತ್ತು ಚಿಕ್ಕಬೀರರಿಗೆ ತಾವು ಮಾಡಿಲ್ಲದ ತಪ್ಪಿಗಾಗಿ ನೀಡಿದ ಶಿಕ್ಷೆಯನ್ನಂತು ಕುವೆಂಪು ಹೃದಯವಿದ್ರಾವಕವಾಗಿ ಚಿತ್ರಿಸಿದ್ದಾರೆ. ಗೌಡರು ಹೇಳಿಕಳಿಸಿದ್ದಾರೆಂದು ತಿಳಿದ ಕೂಡಲೇ ದೊಡ್ಡಬೀರ ಹಿಂದಿನ ದಿನ ಸಾಯಂಕಾಲ ದೇವಯ್ಯ ಗೌಡರ ಬೈಸಿ ಕಲ್ ಕಲಿಕೆ ಸಾಹಸದಲ್ಲಿ ಬಿದ್ದು ಗಾಯವಾಗಿ ಮೈ ಕೈ ನೋವಿನಿಂದ ನರಳುತ್ತಿದ್ದರೂ, ತನ್ನ ಮಗ ಸಣ್ಣ ಬೀರನ ಸಹಾಯದಿಂದ ಗೌಡರ ಮನೆಯ ಹತ್ತಿರ ಬಂದನು. ಆಗಲೇ ವಸೂಲಿ ಸಾಬರು ಅಲ್ಲಿಗೆ ಬಂದಾಗಿತ್ತು. ಅದನ್ನು ಗಮನಿಸಿ ಸಣ್ಣಬೀರನಿಗೆ ಭಯವಾಗಿ ಅಪ್ಪನನ್ನು ಕುರಿತು 'ಅಪ್ಪಾ ಯಾಕೊ ಬೀಡಿ ವಾಸನೆ ನೋಡಿದ್ರೆ ಸಾಬರನ್ನು ಕರೆಸಿದ್ದಾಂಗೆ ಕಾಣ್ತದೋ? ಹೊತ್ತಾರೆ ಎಡಮಗ್ಗುಲಾಗೆ ಎದ್ದೆನೋ ಏನೋ ನಾನು? ಏನು ಗಿರಾಚಾರಾ ಕಾದಿದೆಯೋ? ಅವತ್ತು ಹೊಡೆಸಿದ್ರಲ್ಲ ಮಗ್ಗಲು ಮುರಿಯೊ ಹಾಂಗೆ ಹೊನ್ನಾಳಿ ಹೊಡೆತ'" ಎಂದು ಕಂಪಿಸುತ್ತಾನೆ. ಅಷ್ಟರಲ್ಲಿ ಒಳಗಿನ ಅಂಗಳದಿಂದ ಆ ಇಬ್ಬರು ಹೊನ್ನಾಳಿ ಸಾಬಿಗಳು ಈ ಇಬ್ಬರೂ ತಂದೆ ಮಗ ಕುಳಿತಲ್ಲಿ ಬಂದು ಸ್ವಲ್ಪ ದೂರದಲ್ಲಿ ನಿಂತರು. ತಾನು ಕಡಿಯಲಿರುವ ಕುರಿಗಳು ಪುಷ್ಟವಾಗಿದೆಯೋ ಇಲ್ಲವೋ ಎಂಬುದನ್ನು ಅರಿಯಲು ಅವುಗಳನ್ನು ನೋಡುವಂತೆ ಸಾಬರು ದೊಡ್ಡಬೀರ ಮತ್ತು ಚಿಕ್ಕಬೀರರನ್ನು ದುರುದುರುನೆ ನೋಡಿದರು. ಸಿಂಡ ಮೂಗಿನ ಕುಳ್ಳ ಲುಂಗಿ ಸಾಬಿಯ ಮುಖದಲ್ಲಿ ·ಅಪಹಾಸ್ಯದ ನಗೆ ತನ್ನನ್ನು ಮೂದಲಿಸುತ್ತಿರುವಂತೆ ಸಣ್ಣಬೀರನಿಗೆ ಭಾಸವಾಯಿತು. 'ಓಹೋ.. ಹೋ.. ಸರದಾರರ ಮಕ್ಕಳು. ಏನು ದೌಲತ್ತೋ ನಿಮಗೆ? ನವಾಬರು ಕೂತ ಹಂಗೆ ಕೂತಿದಾರೆ. ಏಳ್ರೋ ಎದ್ದು ನಿಲ್ರೋ. ಏನು ಜಂಭ ಇವಕ್ಕೆ ಎಂದು ಹಂದಿ ಯಂತೆ ಹ್ಞೂಂಕರಿಸಿದ ಇಜಾರದ ಸಾಬ. ಅದಕ್ಕೆ ಥಟಕ್ಕನೆ ಎದ್ದು ನಿಂತ ಬೀರ. ಇದನ್ನು ಕಂಡ ದೊಡ್ಡಬೀರ ಏ.. ಸುಮ್ನೆ ಕೂತ್ಕೋಬಾರದೇನೋ ಹುಡ್ಗಾ ಎಂದು ತನ್ನ ಮಗನ ಹಿಡಿದೆಳೆದು ಕೂರಿಸಿ ಹುಸಿನಗು ನಗುತ್ತಾ 'ಈ ಇಜಾರದ ಸಾಬಣ್ಣನಿಗೆ ಕಸುಬಿಲ್ಲ ಹೋದಲಿ ತನಕ ದುಂಡಾವರ್ತಿ ದರ್ಬಾರು,

ಜಬರದಸ್ತು. ಅದಕ್ಕೆ ಮತ್ತೇ ಕಮ್ಮಾರ ಸಾಲೇಲಿ ಪುಟ್ಟಾಚಾರರ ಮೇಲೆ ಕೈಮಾಡಿ ಹೂವಳ್ಳಿ ನಾಯಕರ ಹತ್ರ ಕನಾತಿ ತಿಂದಿದ್ದು' ಎಂದು ಮೂದಲಿಸುತ್ತಾನೆ.

ಇಜಾರದ ಸಾಬಿಯು ಲುಂಗಿಯ ಸಾಬಿಯ ಕಡೆ ತಿರುಗಿ ತುರುಕ ಮಾತಿನಲ್ಲಿ 'ಇವನಿಗೆ ಏನ ಮ್ತೀಯಾ ಸೊಕ್ಕು. ಕೇರಿಗೆ ಯಜಮಾನ ಅಂತಾ ಬಹಳ ಧಿಮಾಕು. ಅವತ್ತು ನಾನು ಅಜೀಜು ಚಮಡ ಕ್ಕಾಗಿ ಕುದುರೆ ತಟ್ಟು ತೆಗೆದುಕೊಂಡು ಇವರ ಕೇರಿಗೆ ಹೋದಾಗ ನೀವು ಕೇರಿ ಒಳಗೆಲ್ಲಾ ಬರಬಾರದು. ನಮಗೂ ದೇವರೂ ದಿಂಡಿರು ಇದಾರೆ. ನಮ್ಮ ಜಾತಿ ಕೆಟ್ಟು ಹೋಗುತ್ತದೆ ಅಂತಾ ಏನೇನೋ ಬೊಗಳಿ ಬಿಟ್ಟ. ಇವತ್ತು ಇವನ ಮತ್ತು ಇವನ ಮಗನ ಸೊಕ್ಕನ್ನೆಲ್ಲಾ ಇಳಿಸಿಬಿಡ್ತೀನಿ. ಗೌಡರು ಬೆತ್ತ ತಗೋ ಅನ್ನಿ' ಎಂದು ಹುಬ್ಬೇರಿಸಿದನು. ಗೌಡರ ಹೆಸರಿನಲ್ಲಿ ತನ್ನ ಸ್ವಾರ್ಥವನ್ನು, ದರ್ಪವನ್ನು ತೀರಿಸಿಕೊಳ್ಳಲು ಈ ಸಾಬಿ ಕಾಯುತ್ತಿರುತ್ತಾನೆ ಪಾಪ ಅಮಾಯಕರಾದ ರಕ್ತ ಮಾಂಸಗಳಿಲ್ಲದ ಈ ಬಡವರ ಮೇಲೆ. ಮತ್ತೆ ದೊಡ್ಡ ಬೀರನ ಕಡೆ ತಿರುಗಿ ಮೀಸೆ ಕುಣಿಸುತ್ತಾ 'ನಿನಗೆ ಇವತ್ತು, ನಾಳೇ ನಿನ್ನ ಹೂವಳ್ಳಿ ನಾಯಕರಿಗೆ ಜಾಸ್ತಿಯಾಗಿದ್ದ ಚರ್ಬಿ ಕರಗ್ತದೆ ನೋಡ್ತಾಯಿರು' ಎಂದು ರೋಷದಿಂದ ಹೇಳುತ್ತಾನೆ. ಇವತ್ತು ಗೊತ್ತಾಗ್ತದೆ ನಿಮ್ಮಿಬ್ಬರಿಗೂ ಹೊನ್ನಳ್ಳಿ ಹೊಡೆತದ ರುಚಿ ಎಂದು ಒದರುತ್ತಾನೆ ಲುಂಗಿಸಾಬು. ಅಷ್ಟರಲ್ಲಿ ಹೊರ ಬಂದ ಗೌಡರು ದೊಡ್ಡ ಬೀರ ಮತ್ತು ಸಣ್ಣ ಬೀರನನ್ನು ತಿಮ್ಮಿಯ ವಿಚಾರವಾಗಿ ಸರಿಯಾದ ಉತ್ತರ ಬರದಿದ್ದಾಗ ಅವರನ್ನು ಕಟ್ಟಿಹಾಕಿ ಹುಣಸೆ ಬರಲಿನಿಂದ ಹೊಡೆಯಲು ಹೇಳುತ್ತಾರೆ.

ಇಜಾರದ ಸಾಬು ತನ್ನ ಕೈಯಿಂದ ಉಗ್ರ ಸನ್ನೆ ಮಾಡಿ ತಲೆಯಾಡಿಸಿ ಕರೆದೊಡನೆಯೇ ಗಾಡಿ ನೊಗಕ್ಕೆ ಹೆಗಲು ಕೊಟ್ಟು ಕೊಟ್ಟು ಅಭ್ಯಾಸವಾಗಿದ್ದ ಗಾಡಿ ಎತ್ತು, ಗಾಡಿ ಹೊಡೆಯುವವನು ಮೂಕಿಗೆ ಕೈ ಹಾಕಿ ಎತ್ತಿ ಲೊಚಗುಟ್ಟಿದೊಡನೆಯೆ ನೊಗಕ್ಕೆ ವಿನಯತೆಯಿಂದ ಹೆಗಲು ಕೊಡುವಂತೆ, ಸಣ್ಣ ಬೀರ ನಡು ನಡುಗುತ್ತಲೇ ನಾಲಿಗೆಯೇ ಬಿದ್ದು ಹೋಗಿ ಮಾತು ಸತ್ತವನಂತೆ, ಮೂಕಪಶುವಿನಂತೆ, ಒಮ್ಮೆ ಕೆರಳಿ ಕುಳಿತಿದ್ದ ಗೌಡರನ್ನು, ಒಮ್ಮೆ ದುಃಖಾದೀನನಾಗಿ ಪರಿತಪಿಸುತ್ತಿದ್ದ ತನ್ನ ತಂದೆಯನ್ನು ನೋಡುತ್ತಾ ಶಿಕ್ಷಾ ಸ್ತಂಭದ ಕಡೆ ಮುಂದುವರಿದನು. ಅವನು ಹೋದ ರೀತಿ ಆ ಕಂಬವನ್ನು ತಬ್ಬಿನಿಂತ ರೀತಿ ಎರಡೂ ಕೈಗಳನ್ನು ಜೋಡಿಸಿ ಹಗ್ಗ ಬಿಗಿಸಿಕೊಂಡ ರೀತಿ ಹೇಗಿತ್ತೆಂದರೆ ಯೂಪಸ್ತಂಭಕ್ಕೆ ಯಜ್ಞ ಪಶುವನ್ನು ಕಟ್ಟುವಂತಿತ್ತು.

ಲುಂಗಿ ಸಾಬು ತಂದು ಒಟ್ಟಿದ್ದ ಹುಣಸೆ ಬರಲಿನಲ್ಲಿ ಒಂದನ್ನು ತಜ್ಞನಂತೆ ಪರಿಶೀಲಿಸಿ ಆರಿಸಿ ಕೊಂಡ ಇಜಾರದ ಸಾಬು ಸಣ್ಣ ಬೀರನ ಬತ್ತಲೆ ಬೆನ್ನ ಮೇಲೆಯೂ, ಕೊಳಕಾಗಿದ್ದ ಪಂಚೆ ಸುತ್ತಿದ್ದ ಅಂಡಿನ ಮೇಲೆಯು ಸಶಬ್ದವಾಗಿ ಪ್ರಯೋಗಿಸಿದನು. 'ಚಿಟಾರನೆ ಕೂಗಿಕೊಂಡು ಚೀರಿ ರೋಧಿಸುತ್ತಾ ದಮ್ಮಯ್ಯ ಸಾಬ್ರೆ ಹೊಡಿಬ್ಯಾಡಿ. ನಾ ಸಾಯ್ತಿನಿ. ನನ್ನ ಹೆಂಡ್ರು ಮಕ್ಕಳ ಬಾಯ್ಗೆ ಮಣ್ಣು ಹಾಕಬ್ಯಾಡಿ.

ಅಯ್ಯೋ ಅಪ್ಪಾ ಬಿಡಿಸೋ ನಂಗೊತ್ತಿಲ್ಲೋ ತಿಮ್ಮಿ ಎಲ್ಲಿ ಹೋದ್ಲೋಂತಾ' ಎಂದು ಒದ್ದಾಡಿಕೊಂಡು ಒರಲುತ್ತಿದ್ದ ಸಣ್ಣಬೀರನ ರುದ್ರ ರೋಧನವನ್ನು ಕೇಳುವವರಾರು ಇಲ್ಲದಂತಾಗಿದೆ. ಕರುಣೆ ಇಲ್ಲದ ಪಾಷಂಡಿಗಳಾದ ಸಾಬರು ಆತನನ್ನು ದನ ಬಡಿಯುವಂತೆ ಬಡಿಯುತ್ತಿದ್ದಾರೆ. ಮೊದಲ ಬಾರಿಯ ಹೊಡೆತಕ್ಕೆ ಬಾಸುಂಡೆಗಳೆದ್ದಿದ್ದ ಬೆನ್ನು, ಎರಡನೆಯ ಸುತ್ತಿನ ಪೆಟ್ಟಿಗೆ ಕೆಂಪಾಯಿತು. ನೆತ್ತರು ಚಿಮ್ಮ ತೊಡಗಿ, ಅವನು ಉಟ್ಟಿದ್ದ ಪಂಚೆ ಒದ್ದೆಯಾಗಿ ಅಂಡಿನ ಬಟ್ಟೆಯು ರಕ್ತಮಯವಾಯಿತು. ಅವನ ಕೂಗು ಒಮ್ಮೆಗೆ ನಿಂತು ಬಿಟ್ಟಿತು. ತಲೆ ಕತ್ತಿನ ಮೇಲೆ ನಿಲ್ಲಲೊಲ್ಲದೆ ಜೋಲಿತು. ಇಂತಹ ನೀಚ ಕುಕೃತಿ ವಿಕೃತಿಗಳಿಗೆ ಹೆಸರಾಗಿದ್ದ ಹೊನ್ನಳ್ಳಿ ಮತ್ತು ಮೇಗರವಳ್ಳಿ ಸಾಬರ ಬಗ್ಗೆ ಯಾರು ಗೌರವವನ್ನು, ವಿಶ್ವಾಸ ವನ್ನು ಇಟ್ಟುಕೊಂಡಿರಲಿಲ್ಲ. ಬಹುಪಾಲು ಜನರ ವಿರೋಧದ ನಡುವೆಯು ಅವರ ದರ್ಪ ಮುಂದುವರೆ ದಿತ್ತು. ಸಮಾಜದ ಜನರನ್ನು ಕಿತ್ತು ತಿನ್ನುವ ಜಿಗಣೆಗಳಂತೆ ಅವರು ವರ್ತಿಸುತ್ತಿದ್ದರು. ಅಲ್ಲಿನ ಜನರ ಜೊತೆ ಯಾವ ಭಾವಪೂರಿತ ಸಂಬಂಧವೂ ಅವರಲ್ಲಿರಲಿಲ್ಲ.

ಇನ್ನೊಮ್ಮೆ ದೊಡ್ಡಬೀರನ ಸಂಸಾರದ ಜನರು ಸಿಂಬಾವಿಗೆ ಹೋಗುತ್ತಿದ್ದಾಗ, ಅಲ್ಲಿ ಕಟ್ಟಿಹಾಕಿದ್ದ ಕುದುರೆಯನ್ನು ನೋಡಿ ಅವರು ಹೀಗೆ ಮಾತಾಡಿಕೊಳ್ಳುತ್ತಾರೆ, 'ಇದೇನು? ಅಜ್ಜಿಸಾಬರ ತಟ್ಟು ಇಲ್ಲಿ. ಅಜ್ಜಿ ಸಾಬರದಲ್ಲೊ ಮೆಗರೋಳ್ಳಿ ಕರಿಮೀನು ಸಾಬರದು ಅಂತ ಕಾಣಿಸ್ತದೆ. ಯಾರ ಹಿತ್ತಲ ಕಬ್ಬೊ! ಯಾರ ತ್ವಾಟದ ಬಾಳೆಗೊನೆಯೋ ಲೂಟಿಯಾಗಿರಬಹುದು. ಅಂತು ಈ ಸಾಬರ ತಂಡದ ದೆಸೆಯಿಂದ ಸುಖ ಇಲ್ಲ. ಆ ದುಣ್ಣಮುಂಡೆ ಗಂಡ! ಇಜಾರದ ಸಾಬಿ ಅವನ್ನ ಯಾರಾದರು ಕಡಿದು ಹಾಕಿದರೆ, ಒಂದು ಹಂಡೆ ಹಾಲು ಕುಡೀತೀನಿ' ಎಂದು ಪ್ರತೀಕಾರ ಮಾಡಲಾರದ ಸಿಟ್ಟಿನಿಂದ ಸಣ್ಣ ಬೀರ ಹೇಳಿದ. ಅಪ್ಪ ತಮಾಷೆ ಮಾಡಿದಾಗ, ನೀ ತಮಾಷೆ ಮಾಡಬೇಡ ಅಪ್ಪ. ಆ ಮೂಕಿ ಮನೆ ಈರಣ್ಣನ ಕಡ್ದು ರಕ್ತ ಕುಡಿದ್ರಂತಲ್ಲ ಹಂಗೆ ಅವನ ರಕ್ತ ಕುಡೀದೆ ಇದ್ರೆ ನಾ ಅಪ್ಪಗುಟ್ಟುದವನಲ್ಲ ನೋಡ್ತಿರು. 'ತನ್ನ ಬೆನ್ನ ಬಾಸುಂಡೆ ಇನ್ನು ಮಾದಿಲ್ಲ. ಏನೋ ನಮ್ಮ ಧಣಿ ಅನ್ನ ಹಾಕಿ ಸಾಕ್ದೋರು ಅಂತ ಅವತ್ತು ಸುಮ್ಮನಿದ್ದೆ. ಇನ್ನೊಂದು ಸಲ ನನಗೆ ಸಮಯ ಸಿಕ್ಕಲಿ ನೋಡ್ತಿರಿ ನನ್ನ ಕೈಲಿ ಏನಾಗ್ತದೆ ಅಂತ. ಬಗನಿ ಕತ್ತೀನ ಮಸೆದು ಇಟ್ಕೊಂಡಾಗೆ ಇಟ್ಕೊಂಡೀನಿ ನನ್ನ ಕೆಲಸದ ಕತ್ತೀನ. ಒಂದೇ ಕೊಚ್ಚಿಗೆ ಅವನ ಆನೆಗಾತ್ರದ ಕುತ್ತಿಗೆ ಕತ್ತರಿಸಿ ಬೀಳಬೇಕು ಆಂಗೊಡಿತೀನಿ' ಎಂಮ ರೋಷವನ್ನು ಪ್ರದರ್ಶಿಸುತ್ತಾನೆ ಸಣ್ಣಬೀರ.

ತಾವು ಮಾಡಿಲ್ಲದ ತಪ್ಪಿಗೆ ಶಿಕ್ಷೆ ನೀಡಿದ ಗೌಡನ ಬಗ್ಗೆ ಅವರಿಗೆ ಉದಾರತೆ ಇದೆಯಾದರೂ ತಮ್ಮನ್ನು ನೀಚವಾಗಿ ಬರ್ಬರವಾಗಿ ಶಿಕ್ಷಿಸಿದ ಸಾಬರ ದರ್ಪದ ಬಗ್ಗೆ ಬೀರನ ಕುಟುಂಬದವರಿಗೆ ಕೋಪ ಕಡಿಮೆಯೇ ಆಗದು. ತಾನು ಎಂತಹಾ ಖೂನಿ ಮಾಡಲು ಸಿದ್ಧನಾಗಿರುವೆನೆಂಬ ಸಣ್ಣಬೀರನ ಮಾತಿನಲ್ಲಿ ಅವನ ಆಕ್ರೋಶ ಎಷ್ಟಿದೆ ಎಂಬುದನ್ನು ಅರ್ಥ ಮಾಡಿಕೊಳ್ಳಬಹುದು.

ದೊಡ್ಡ ಬೀರನ ಸಂಸಾರ ಸಾಗಿ ಮುಂದೆ ಹೋದ ಮೇಲೆ ಸ್ವಲ್ಪಹೊತ್ತಿನಲ್ಲಿ ಸೀತೂರಿನ ದಿಕ್ಕಿನಿಂದ ಇಜಾರದ ಸಾಬಿಯು ಲುಂಗಿ ಸಾಬಿಯೂ ಅಳುವಿನಲ್ಲಿ ಗುಡ್ಡವನ್ನೇರಿ ಬರುತ್ತಾರೆ. ಇಜಾರದ ಸಾಬಿಯ ಬೆನ್ನಿನ ಮೇಲೆ ಬಾರೀ ಗಾತ್ರದ ಕರಿಬಾಳೆಗೊನೆ ಇದೆ. ಲುಂಗಿ ಸಾಬಿಯ ಹೆಗಲ ಮೇಲೆ ಒಂದು ತಕ್ಕ ಮಟ್ಟಿಗೆ ದೊಡ್ಡದೇ ಆದ ದಾಸಕಟ್ಟಿನ ಹೊರೆ ಇದೆ. ಅಂತೂ ದೊಡ್ಡಬೀರನ ಕಡೆಯ ಜನರ ಮಾತುಗಳು ನಿಜವಾದವು. ಆ ಇಬ್ಬರು ಸಾಬರು ಅಜ್ಜಿ ಸಾಬುವಿನ ಹತ್ತಿರ ಬಂದಾಗ, ಅವುಗಳನ್ನು ಕರುಬಿನಿಂದಲೇ ನೋಡಿದ ಅಜ್ಜಿಸಾಬು ಎಂಥಾ ಬಾಳೆಗೊನೆ ಅಬ್ಬಾ! ಏನು ಕೊಟ್ಟೆ ಎಂದಾಗ, 'ಹರಾಮ್ ಬಾಂಚೊತ್ ಏನು ಉಡಾಫೀ ಮಾತು ಆಡಿದ ಅವನು' ಎಂದು ಮುಸ್ಲೀಂ ಭಾಷೆಯಲ್ಲಿ ಹೇಳುತ್ತಾನೆ. ವ್ಯಾಪಾರದ ಚೌಕಾಸಿಯಲ್ಲಿ ಭಿನ್ನಾಭಿಪ್ರಾಯ ಬಂದು ಮಾತಿಗೆ ಮಾತು ಹತ್ತಿರಬಹುದೆಂದು ಊಹಿಸಿ ಅಜ್ಜಿ ಸಾಬು ಎಲ್ಲಿ ತೋಟದಲ್ಲಿ ಯಾಪಾರ ಆಯ್ತಾ ಎಂದರು. ಆಗಿದ್ದು ತೋಟದಲ್ಲೇ! ಆಗಿದ್ದು ಯಾಪಾರ ಮಾತ್ರ ಅಲ್ಲ ಎಂದು ಲುಂಗಿಸಾಬು ವ್ಯಂಗ್ಯವಾಗಿ ನಕ್ಕ. "ಚೂರಿ ತೋರಿಸಿದ್ದೇ ತಡ ಲೌಡಿ ಮಗ ಪರಾರಿಯಾಗ್ಬಿಟ್ಟಾ ಎನ್ನುತ್ತಾ ಇಜಾರದ ಸಾಬಿ ವಿಕಟವಾಗಿ ನಗತೊಡಗಿದ. ಬಹುಮಟ್ಟಿಗೆ ಅಸೂಯೆಯಿಂದಲೇ ಪ್ರೇರಿತನಾಗಿದ್ದ ದುರ್ಬಲನೂ ಕೃಶ ಶರೀರೀಯೂ ಆಗಿದ್ದ ಅಜ್ಜಿಸಾಬಿಯ ನೀತಿಪ್ರಜ್ಞೆ ಎಚ್ಚೆತ್ತಂತಾಗಿ ತನ್ನ ಮನದಲ್ಲಿಯೇ ನೀನು ಇಲ್ಲಿ ಕಂಡ ಕಂಡವರ ಅಡಿಕೆ ತೋಟಕ್ಕೋ, ಬಾಳೆ ತೋಟಕ್ಕೋ, ಕಬ್ಬಿನ ಹಿತ್ತಲಿಗೋ ನುಗ್ಗಿ ದುಂಡಾವರ್ತಿಯಿಂದ ಲೂಟೀ ಮಾಡ್ತಿರೂ ನಿನಗೆ ಒಂದು ದಿನ ಸರಿಯಾಗಿ ಆಗ್ತದೆ ಎಂದುಕೊಳ್ಳುತ್ತಾನೆ. ತಾನು ಸಹ ದುಂಡಾವರ್ತಿಯಾಗಿದ್ದರೂ ಅಜ್ಜಿಸಾಬಿಯ ಅಂತರಾಳದಲ್ಲಿ ತಲೆದೋರಿದ ಈ ನೀತಿಪ್ರಜ್ಞೆಯು ಆಶ್ಚರ್ಯವೆನಿಸುತ್ತದೆ. ಮಾಡಿದ ತಪ್ಪಿಗೆ ತಕ್ಕ ಶಿಕ್ಷೆ ಎನ್ನುವ ಸರ್ವವಿಧಿತ ನಿಯಮವನ್ನು ಕುವೆಂಪು ಎಲ್ಲ ಸಮಾಜ, ಸಮುದಾಯ, ಜನಾಂಗ ವರ್ಗಕ್ಕೆ ಹೇಳಿಕೊಟ್ಟಿದ್ದಾರೆ ಎನ್ನುವಂತಿದೆ ಈ ಅಜ್ಜಿ ಸಾಬಿಯ ನುಡಿಗಳು. ಸಾಬರು ಬಾಳೆಗೊನೆ ಕಬ್ಬನ್ನು ಲೂಟಿ ಮಾಡಿ ಬಂದ ಸ್ವಲ್ಪ ಸಮಯದಲ್ಲಿಯೇ ಆ ಕಾಡುದಾರಿಯಲ್ಲಿ ಲಕ್ಕುಂದದ ಸೇಸಾನಾಯಕರ ಮಗ ಹಮೀರ ಹೆಗಲ ಮೇಲೆ ಹಲಸಿನ ಹಣ್ಣನ್ನು ಹೊತ್ತುಕೊಂಡು ಬರುತ್ತಿರುತ್ತಾನೆ. ಈ ಸಾಬರು ಅವನನ್ನು ಬಿಡದೆ ಲೇವಡಿ ಮಾಡಿ ಆ ಹಣ್ಣನ್ನು ಸಹ ಕಬಳಿಸುತ್ತಾರೆ. ಹಲಸಿನ ಹಣ್ಣಿಗಾಗಿ ಮಾತಾಡುತ್ತಾ ಹಮೀರನನ್ನು ಅವನ ಹಲ್ಲು ಮುರುಕುತನ, ಆತನ ಮದುವೆ ಇತ್ಯಾದಿಗಳ ಬಗ್ಗೆ ಬಹಳ ಅಸಹ್ಯವಾಗಿ ಆ ಸಾಬರು ಮೂದಲಿಸುತ್ತಾ ಮಾತನಾಡುತ್ತಾರೆ. ಅವರ ಮಾತಿನ ವ್ಯಂಗ್ಯ ಮತ್ತು ನಿಂದನೆಯನ್ನು ಅರ್ಥ ಮಾಡಿಕೊಂಡ ಹಮೀರ 'ಥೂ' ಎಂದು ಯಾರ ಮುಖಕ್ಕೋ ಉಗುಳುವವನಂತೆ 'ನಾನೇನು ಹಗಲು ಹನ್ನೆರಡು ಗಂಟೆಗೆ ರಾಜ್ಯ ಕಳೆದುಕೊಂಡವರ ಜಾತಿಯಲ್ಲ ಹಂಗೆಲ್ಲಾ ಮಾಡೋಕೆ ಅಂದುಬಿಡುತ್ತಾನೆ.' ಹಗಲು ಹನ್ನೆರಡು ಗಂಟೆ ಹೊತ್ತಿನಲ್ಲಿ ಶ್ರೀರಂಗಪಟ್ಟಣವನ್ನು ಕಳಕೊಂಡರೆಂದು ಮುಸಲ್ಮಾನರನ್ನು ಮೂದಲಿಸಿ ಮಾತನಾಡುವುದು ಆಗ ವಾಡಿಕೆಯಾಗಿತ್ತು. ಮುಸಲ್ಮಾನರಿಗೂ ಆ ನಿಂದನೆ ಅಸಹನೀಯ

ಅವಮಾನಕರವಾಗಿದ್ದರಿಂದ ಯಾರಾದರು ಹಾಗೆ ನಿಂದಿಸಿದರೆ ಅವರನ್ನು ಸಾಬರು ಖೂನಿ ಮಾಡಲೂ ಸಹ ಹಿಂದು ಮುಂದೆ ನೋಡುತ್ತಿರಲಿಲ್ಲ.

ಸಾಬರ ದುಂಡಾವರ್ತಿ, ದರ್ಪ, ಕಳ್ಳತನ ಹೀಗೆಯೇ ಮುಂದುವರೆದು ಗುತ್ತಿಯ ಮನೆಯಲ್ಲಿ ಪ್ರೀತಿಯಿಂದ ಸಾಕಿದ್ದ ಗಬ್ಬದ ಕುರಿಯೂ ಅವರ ಪಾಲಾಗುತ್ತದೆ. ದೊಳ್ಳನಿಂದ ವಿಷಯ ತಿಳಿದು ಕೆಮ್ಮಣ್ಣುಬ್ಬಿನ ಸ್ಥಳಕ್ಕೆ ಬಂದಾಗ ಅವರಿಗೆ ಎಲ್ಲಾ ಸಾಕ್ಷಿ ಸಿಗುತ್ತದೆ. ಇದೇ ಸಮಯಕ್ಕೆ ದೊಡ್ಡಬೀರನ ಮಗ ಸಣ್ಣಬೀರ, ಭಾವನಾದ ಗುತ್ತಿಯನ್ನು ಹುರಿದುಂಬಿಸಿ ಸಾಬರ ಮೇಲೆ ಆಕ್ರಮಣ ಮಾಡಲು ಸಿದ್ಧನಾಗಿರುತ್ತಾನೆ. ಅಲ್ಲಿ ಸಿಕ್ಕ ಇಜಾರದ ಸಾಬುವಿಗೂ ಗುತ್ತಿಯ ಕಡೆಯವರಿಗೂ ಭಯಂಕರವಾದ ಹೊಡೆದಾಟ ನಡೆಯುತ್ತದೆ. ಇಜಾರದ ಸಾಬಿಗೆ ಕೈ ಕತ್ತರಿಸಿ ಮಂಡೆಗೆ ಪೆಟ್ಟು ಬಿದ್ದಿರುತ್ತದೆ. ತಲೆಬುರುಡೆಗೆ ಗುತ್ತಿಯು ಬಗನಿ ದೊಣ್ಣೆಯಿಂದ ಬೀಸಿದ್ದರಿಂದ ರಕ್ತ ಸೋರುತ್ತದೆ. ಸಣ್ಣಬೀರನ ಕತ್ತಿಯ ಏಟಿಗೆ ಸಾಬಿಯ ಬಲಗೈ ಹೆಬ್ಬೆರಳು ಅರ್ಧಕ್ಕೂ ಹೆಚ್ಚಾಗಿಯೇ ಕತ್ತರಿಸಿ ನೇತಾಡುತಿತ್ತು. ಮೊಣಕಾಲಿನ ಭಾಗಕ್ಕೆ ಬಲವಾಗಿ ಏಟು ತಗುಲಿ ಮಾಂಸ ಹಿಸಿದು ನೆತ್ತರು ಸೋರಿ ಎಲುಬು ಕಾಣಿಸುತ್ತಿತ್ತು. ಗುತ್ತಿಯ ಮುಖ ಮತ್ತು ಭುಜದ ಭಾಗಗಳಲ್ಲಿ ಚೂರಿಯ ಇರಿತಗಳಿಂದ ಗಾಯಗಳಾಗಿದ್ದವು. ಹೀಗೆ ಈಗಾಗಲೆ ನೆಲೆಯಾಗಿದ್ದ, ಕಾಡಿನ ಜನರ ಸಮಾಜದ ಮೇಲೆ ದುಂಡಾವರ್ತಿ ದರ್ಪ ತೋರುತ್ತಿದ್ದ, ಕೊಲೆ, ಸುಲಿಗೆ, ಕಳ್ಳತನಗಳಿಗೆ ಹೆಸರಾಗಿದ್ದ, ಸಮುದಾಯದ ಸಾಮಾಜಿಕ ಅನೀತಿಗಳನ್ನು ಕುವೆಂಪು ಇಲ್ಲಿ ಚಿತ್ರಿಸಿದ್ದಾರೆ.

## ಪುರೋಹಿತ ವರ್ಗ :

ಪುರೋಹಿತಶಾಹಿ ವರ್ಗದ ಅಧಿಪತ್ಯವನ್ನು ಕುರಿತು ಅನೇಕ ಸಾಹಿತಿಗಳು, ತತ್ವಜ್ಞಾನಿಗಳು, ಸುಧಾರಣಾವಾದಿಗಳು ಗಾಢವಾಗಿ ಚಿಂತಿಸಿದ್ದಾರೆ. ಪುರೋಹಿತ ಎಂದರೆ ವೇದೋಕ್ತ ಕರ್ಮಗಳನ್ನು ಮಾಡಿಸುವವನು. ಎಲ್ಲಾ ಮಂಗಳ ಕಾರ್ಯಗಳನ್ನು ಮುಂದೆನಿಂತು ನಡೆಸಿಕೊಡುವವನು. ಧಾರ್ಮಿಕ ದೀಕ್ಷೆಯನ್ನು ಕೊಡುವವನು ಮೊದಲಾದ ಅರ್ಥಗಳಿವೆ. ಆದರೆ ಪುರೋಹಿತ, ಪುರೋಹಿತಶಾಹಿ ವರ್ಗಗಳಿಗೆ ಪ್ರತ್ಯೇಕವಾದ ವಿವರಣೆಯನ್ನು ಕುವೆಂಪು ನೀಡುತ್ತಾರೆ. 'ಕೆಲವು ಕಡೆ ಬೂರ್ಷ್ವಾ ಎಂದು ಹೇಳುತ್ತಾರೆ. ಪೋಲಿಟೆರಿಯೆಟ್ ಅಂತಾ ಹೇಳುತ್ತಾರೆ. ಆದರೆ ನಮ್ಮ ಬೂರ್ಷ್ವಾ ಪೊಲಿಟೆರಿಯೆಟ್ ವಿಭಜನೆಗೆ ಬದಲಾಗಿ ನಾವು ಜಾತಿಗಳನ್ನು ಹೇಳಬೇಕಾಗಿದೆ. ನಮ್ಮ ದೇಶದಲ್ಲಿ ಪುರೋಹಿತ ವರ್ಗ ಎಂದರೆ ಬ್ರಾಹ್ಮಣ ವರ್ಗ ಎಂದರ್ಥ. ಆದರೆ ವಾಸ್ತವವಾಗಿ ಪುರೋಹಿತಶಾಹಿ ಅಥವಾ ಪುರೋಹಿತವರ್ಗ ಎಂದರೆ ಬರೀ ಬ್ರಾಹ್ಮಣರು ಮಾತ್ರವಲ್ಲ. ಹಿಂದೂಗಳಲ್ಲಿ ಮಾತ್ರ ಬ್ರಾಹ್ಮಣರಿರುವುದು. ಆದರೆ ಕ್ರೈಸ್ತರಲ್ಲಿ ಪುರೋಹಿತಶಾಹಿ ಇದೆ. ಮುಸ್ಲಿಮರಲ್ಲಿಯೂ ಇದೆ. ಬೌದ್ಧ ಧರ್ಮದಲ್ಲಿಯೂ, ಎಲ್ಲ ಮತಗಳಲ್ಲಿಯೂ ಇದೆ. ಆದರೆ ನಾನು ಮಾತನಾಡುತ್ತಿರುವ ಪುರೋಹಿತಶಾಹಿ ಎಂದರೆ ನನ್ನ ಈ ಮಾತುಗಳು ಎಲ್ಲ

ಧರ್ಮಗಳ ಒಳಗಿನ ಪುರೋಹಿತಶಾಹಿಗೆ ಅನ್ವಯಿಸುತ್ತದೆ.[೫] ಶೂದ್ರ ತಪಸ್ವಿ, ಜಲಗಾರ, ಧನ್ವಂತರಿ ಚಿಕಿತ್ಸೆ, ದೇವರು ಮತ್ತು ಪೂಜಾರಿ ಕೃತಿಗಳ ಜೊತೆಗೆ ಕಾನೂರು ಹೆಗ್ಗಡಿತಿ, ಮಲೆಗಳಲ್ಲಿ ಮದುಮಗಳು ಕಾದಂಬರಿಗಳಲ್ಲಿಯೂ ಪುರೋಹಿತ ವರ್ಗದ ಅನಾಚಾರಗಳ ಚಿತ್ರಣವಿದೆ. ಸನಾತನ ಸಂಸ್ಕೃತಿಯ ಪರಂಪರೆಯನ್ನು ಅವಮಾನಕ್ಕೀಡುಮಾಡಿ ಅನಾಚಾರಗಳನ್ನೇ ಧರ್ಮ ಸಂಪ್ರದಾಯಗಳೆಂದು ನಂಬಿಸಿ, ಶ್ರೀಸಾಮಾನ್ಯರನ್ನು ಶೋಷಣೆಗೆ ಗುರಿಪಡಿಸಿದ ಒಂದು ಸಾಮಾಜಿಕ ವರ್ಗ ನಮ್ಮ ಮಧ್ಯದಲ್ಲಿಯೇ ಇದೆ. ದೈವೀಶಕ್ತಿಯನ್ನು ಇಲ್ಲವಾಗಿಸಿ ಮಧ್ಯವರ್ತಿಗಳಂತೆ ಮೆರೆಯುತ್ತಿದ್ದ ಈ ದೇವಮಾನವರ! ಕ್ರೂರ ಚಿತ್ರಣ ಇಲ್ಲಿದೆ. ಪುರೋಹಿತ ವ್ಯವಸ್ಥೆ ನಡೆಸಿರುವ ಯಜಮಾನಿಕೆಯನ್ನು ಕುವೆಂಪು ಹೀಗೆ ದಾಖಲಿಸಿದ್ದಾರೆ.

"ರಾಜಕೀಯ ಪ್ರಪಂಚದಲ್ಲಿರುವಂತೆಯೇ ಧರ್ಮ ಪ್ರಪಂಚದಲ್ಲಿಯೂ ಸಂಕುಚಿತ ಭಾವಗಳು, ಕುಂದು ಕೊರತೆಗಳು, ಒಡಕು ಬಿರುಕುಗಳು ಯಥೇಚ್ಛವಾಗಿದ್ದವು. ಅರ್ಥಹೀನವಾದ ನೂರಾರು ಲೋಕಾಚಾರ ಮತ್ತು ಮತಾಚಾರಗಳು, ಸಾವಿರಾರು ಜಾತಿಪದ್ಧತಿಗಳು. ಭಾರತೀಯರು ಉಪನಿಷತ್ತುಗಳಿಂದಲೂ ಮಹರ್ಷಿಗಳಿಂದಲೂ ಆಚಾರ್ಯರಿಂದಲೂ ಪ್ರಣೀತವಾದ ಮಹಾಧರ್ಮದ ಆಂತರಾತ್ಮವನ್ನು ಸಂಪೂರ್ಣವಾಗಿ ಮರೆತು, ಅದರ ಶವದ ಹಂಚಿಕೆಗಾಗಿ ಕಚ್ಚಾಡುತ್ತಿದ್ದರು. ವೇದಾಂತ ದರ್ಶನವು ಜನ ಸಮುದಾಯವನ್ನು ತ್ಯಜಿಸಿ ಪಂಡಿತರ ಸ್ವತ್ತಾಗಿತ್ತು. ಆ ಪಂಡಿತರು ಅಧಿಕಾರವಾದವನ್ನು ಆಶ್ರಯಿಸಿ, ಅಮೃತದಾಯಕವಾದ ವೇದಾಂತ ದರ್ಶನ ದಿವ್ಯಜ್ಯೋತಿ ಪಾಮರ ಜನರ ಕಣ್ಣಿಗೆ ಬೀಳದಂತೆ ನೋಡಿಕೊಳ್ಳುತ್ತಿದ್ದರು. ಅದಕ್ಕೆ ಪ್ರತಿಕೂಲವಾಗಿ ಜನರು 'ಏಕಮೇವಾದ್ವಿತೀಯ ಬ್ರಹ್ಮಂ' ಆರಾಧನೆಯನ್ನು ತ್ಯಜಿಸಿ, ದೇವಾನುದೇವತೆಗಳನ್ನು ವಿಭಜಿಸಿ, ಪಕ್ಷ – ಪ್ರತಿಪಕ್ಷಗಳನ್ನು ಹೂಡಿ ಹೊಡೆದಾಡುವುದರಲ್ಲಿ ಮಗ್ನರಾಗಿದ್ದರು.[೬] ಕಾನೂರು ಹೆಗ್ಗಡಿತಿ ಕಾದಂಬರಿಯಲ್ಲಿ ಬರುವ ವೆಂಕಪ್ಪಜೋಯಿಸ, ಮಲೆಗಳಲ್ಲಿ ಮದುಮಗಳು ಕಾದಂಬರಿಯ ಕಲ್ಲೂರು ಮಂಜಭಟ್ಟರು ಪುರೋಹಿತಶಾಹಿಯ ಪ್ರತಿನಿಧಿಗಳಂತೆ ಕಂಡುಬರುತ್ತಾರೆ.

ಕಲ್ಲೂರು ಮಂಜಭಟ್ಟರು ಕಲ್ಲೂರು ದೇವಸ್ಥಾನಕ್ಕೆ ದಕ್ಷಿಣ ಕನ್ನಡ ಜಿಲ್ಲೆಯಿಂದ ಕೇವಲ ಜನಿವಾರ, ಪಾಣಿ ಪಂಚೆ, ಪಂಚಪಾತ್ರೆ ಹಿಡಿದು ಇಷ್ಟೇ ಆಸ್ತಿಯನ್ನು ತೆಗೆದುಕೊಂಡು ಬಂದವರು. ತನ್ನ ಬುದ್ಧಿವಂತಿಕೆಯಿಂದ ದೊಡ್ಡ ಜಮೀನುದಾರನೂ ಶ್ರೀಮಂತನೂ ಆಗಿದ್ದಾನಲ್ಲದೇ ನಿಮಿತ್ತ ಹೇಳುವುದು, ಜಾತಕ ನೋಡುವುದರಲ್ಲಿ ಹೆಸರುವಾಸಿಯಾಗಿದ್ದಾನೆ. ದಾನ ದಕ್ಷಿಣೆಗಳನ್ನು ಸ್ವೀಕರಿಸಿ ಆ ಹಣವನ್ನು ಬಡ ನಾಯಕ ಗೌಡರಿಗೆ ಸಾಲಕೊಟ್ಟು ಸಾಲ ವಸೂಲಾತಿಗಾಗಿ 'ಹೊನ್ನಾಳಿ ಹೊಡ್ತ' ಶಿಕ್ಷೆ ನೀಡುವ ಭಟ್ಟರ ಸಾಮಾಜಿಕ ಸ್ಥಿತಿ ಒಂದು ಹೊಸ ಅಧ್ಯಾಯವನ್ನೇ ತೆರೆದಂತಿದೆ. ರಂಗಮ್ಮನ ದೀರ್ಘಕಾಲದ ಅನಾರೋಗ್ಯದ ಕಾರಣವನ್ನು ಕುರಿತಾಗಿ ಕಲ್ಲೂರು ಜೋಯಿಸರಿಂದ ನಿಮಿತ್ತವನ್ನು ಕೇಳಿದ್ದು, ಅದರಿಂದ ಒದಗಿದ ದೊಡ್ಡಣ್ಣ ಹೆಗ್ಗಡೆಯ ಸಾವಿನ ದುರಂತವನ್ನು ಕುವೆಂಪು ಪ್ರಜ್ಞಾಪೂರ್ವಕವಾಗಿ ಪ್ರಶ್ನಿಸಿದ್ದಾರೆ.

ಜೋಯಿಸರು ಅಮಂಗಳಕ್ಕೆ ಸೂಚಿಸಿದ ಪರಿಹಾರವೇ ದೀರ್ಘಕಾಲಿಕವಾದ ಅಮಂಗಳವನ್ನು ಉಂಟು ಮಾಡಿದ ಪ್ರಸಂಗವು ಅವೈಜ್ಞಾನಿಕ ಜ್ಯೋತಿಷ್ಯ, ಭವಿಷ್ಯದ ಪೊಳ್ಳು ಸಂಪ್ರದಾಯಗಳನ್ನು ಅಳಿಸಿಹಾಕಲು ಪ್ರಯತ್ನಿಸುತ್ತದೆ.

ಮದುಮಗಳು ಕಾದಂಬರಿಯಲ್ಲಿ ದೊಡ್ಡವರಷ್ಟೇ ಅಲ್ಲದೇ ಅಲ್ಲಿನ ಬಾಲ ಪ್ರತಿಭೆಗಳಾದ ತಿಮ್ಮ, ಕಾಡು ಮುಂತಾದವರಿಗೂ ಈ ಪುರೋಹಿತಶಾಹಿಯನ್ನು ಕಂಡರಾಗದು. ಅವರು ಜನರನ್ನು ಸತ್ಕರಿಸುವ ರೀತಿ, ಆಹಾರ ನೀಡುವ ಕ್ರಮ, ಮಡಿ ಮೈಲಿಗೆ ಪದ್ದತಿಗಳನ್ನು ಮಕ್ಕಳು ತಮ್ಮದೇ ಭಾಷೆಯಲ್ಲಿ ತೆಗಳುತ್ತಾರೆ.

ದಕ್ಷಿಣ ಕನ್ನಡ ಜಿಲ್ಲೆಯಿಂದ ದೀನನಾಗಿ ಬಂದ ಈ ಕಲ್ಲೂರು ಮಂಜಭಟ್ಟರ ಮನೆಯ ಪರಿಚಯ, ವೈದಿಕರ ಬದುಕು ಬವಣೆಗಳ, ಶೂದ್ರ ಮತ್ತು ವೈದಿಕರ ಊಟೋಪಚಾರ, ಸ್ತ್ರೀ ಪುರುಷರ ನಡುವಿನ ಕ್ರೌರ್ಯ ಮತ್ತು ಅನೈತಿಕ ಸಂಬಂಧಗಳನ್ನು ಮತ್ತು ಉಡುಗೆ ತೊಡುಗೆಗಳ ವಿಚಾರವನ್ನು ಹಾರುವರ ಮನೆ ಸುತ್ತ ಮುತ್ತಲಿನ ಪರಿಸರವನ್ನು ಕುರಿತು ಮಕ್ಕಳ ವೀಕ್ಷಣೆ ಮತ್ತು ನಿರೂಪಣೆ ಅತ್ಯಂತ ಸೂಕ್ಷ್ಮ ಮತ್ತು ವಿಡಂಬನಾತ್ಮಕವಾಗಿದೆ. ಹಾಗೆಯೇ ದೇವಯ್ಯ ಮಂಜಭಟ್ಟರ ಸಂಭಾಷಣೆಯಲ್ಲಿ ವೈದಿಕ ಯಜಮಾನ್ಯದ ಬಗೆಗಿನ ಪ್ರತಿರೋಧವನ್ನು ಕಾಣಬಹುದು.

"ಗರ್ಭಗುಡಿಯ ಮಧ್ಯದಲ್ಲಿ ಜೋಯಿಸರು ಮೃದುಸ್ವರದಲ್ಲಿ ಹೇಳಿಕೊಳ್ಳುತ್ತಿದ್ದ ಮಂತ್ರ ಘೋಷ ಅಸ್ಪಷ್ಟವಾಗಿ ಕೇಳುತ್ತಿತ್ತು. ಮೂಲೆಯಲ್ಲಿ ಕಣ್ಣು ಸೆಳೆಯುವಂತೆ ನಿಂತಿದ್ದ ತೋಟಾ ಕೋವಿಯನ್ನು ದುರು ದುರನೆ ನೋಡಿ 'ಯಾರದ್ದದು' ಎಂದು ಐತಾಳನನ್ನು ಕೇಳಿದರು. 'ಬೆಟ್ಟಳ್ಳಿ ದೇವಯ್ಯ ಗೌಡ್ರುದ್ದು' ಎಂದು ಕಿಟ್ಟೈತಾಳ ಪಿಸುಧ್ವನಿಯಲ್ಲಿ ಉತ್ತರಿಸಲು, ಮಂಜಭಟ್ಟರು ನೇರವಾಗಿ ಮುಕುಂದಯ್ಯ ದೇವ ಯ್ಯರು ಕುಳಿತಲ್ಲಿಗೆ ಬಂದರು. ಮುಕುಂದಯ್ಯ ಎದ್ದು ನಿಂತು ಕೈ ಮುಗಿದನು. ಆದರೆ ದೇವಯ್ಯ ಪದ್ಮಾಸನ ಹಾಕಿ ಕುಳಿತವನು ಹಾಗೆಯೇ 'ನಮಸ್ಕಾರ ಸಾಹುಕಾರರಿಗೆ ಎಂದನು.' ಅದನ್ನು ಚೆನ್ನಾಗಿ ಗಮನಿಸಿದ ಮಂಜಭಟ್ಟರು ತಮ್ಮ ಅಸಮಾಧಾವನ್ನು ಒಂದಿನಿತು ಹೊರಗೆಡಹದೆ ಹುಸಿನಗು ನಗುತ್ತಾ ಮೂದಲಿಕೆಯ ಧ್ವನಿಯಿಂದ 'ಓಹೋ ಹೋ ಏನು ದ್ಯಾವಣ್ಣನ ಸವಾರಿ ದೇವಸ್ಥಾನದವರೆಗೂ ಚಿತ್ತೈ ಸಿದೆಯಲ್ಲಾ? ಕಲ್ಲಯ್ಯ ಬಂದಿಲ್ಲೇನೋ? ಹುಷಾರಾಗಿದ್ದಾನಷ್ಟೇ' ಎಂದನು.

ಬ್ರಾಹ್ಮಣರಾದ ಅವರು ಶೂದ್ರನಾದ ನನ್ನನ್ನು ದೇವಯ್ಯ ಎಂದು ಸಂಭೋದಿಸುವುದಕ್ಕೆ ಬದಲಾಗಿ ತನ್ನ ಮೇಲುತನವನ್ನು ಹೆಚ್ಚುಗಾರಿಕೆಯನ್ನು ತಿಕ್ಕಿ ಉಜ್ಜಿ ತನ್ನ ಮನಸ್ಸಿಗೆ ತರುವ ಉದ್ದೇಶ ದಿಂದಲೇ ಕೀಳು ಜನರನ್ನು ಕರೆಯುವ ರೀತಿಯಲ್ಲಿ 'ದ್ಯಾವಣ್ಣ' ಎಂದಿದ್ದನು. ಆ ಪ್ರಾಂತದಲ್ಲೆಲ್ಲಾ ದೊಡ್ಡ

ಮನುಷ್ಯರೆಂದು ಸಂಭಾವಿತರಾಗಿದ್ದು, ಹೆಚ್ಚು ಕಡಿಮೆ ಅವರಷ್ಟೆ ವಯಸ್ಕರಾಗಿದ್ದ ತನ್ನ ತಂದೆಯನ್ನು ಗೌರವಸೂಚಕ ಬಹುಧ್ವನಿಯಿಂದ ಕಲ್ಲಯ್ಯಗೌಡರು ಹುಷಾರಾಗಿದ್ದಾರೆಯೇ? ಎನ್ನದೇ ಕಲ್ಲಯ್ಯ ಹುಷಾರಾಗಿದ್ದಾನೆಯೇ ಎಂದು ಏಕವಚನದಿಂದಲೇ ಮಾತನಾಡಿಸಿದರು. ಆಗ ದೇವಯ್ಯನ ಆತ್ಮಗೌರವ ಸೆಟೆದು ನಿಂತು ಏನಾದರೂ ಚಿಂತೆಯಿಲ್ಲ, ಈ ಹಾರುವನಿಗೆ ಸರಿಯಾಗಿಯೇ ಉತ್ತರ ಹೇಳುತ್ತೇನೆ ಎಂದು ನಿಶ್ಚಯಿಸಿ ಲಘುವಾಗಿ ನಗುತ್ತಾ ಹೇಳಿದನು. 'ಯಾರು ಹಳೆಪೈಕದ ಕಲ್ಲನಾ ಅಂವ ಕದ್ದು ಕಳ್ಳು ಇಳಿಸಾಕೆ ಕಾಡಿಗೆ ಹೋಗಿರಬೇಕು' ಎಂದನು. ಅಲ್ಲ ಮಾರಾಯಾ ನಿನ್ನ ಅಪ್ಪಯ್ಯ ಕಲ್ಲಯ್ಯಗೌಡರು ಹುಷಾರಾಗಿದ್ದಾರೆಯೇ ಎಂದು ಕೇಳಿದ್ದು. ಬಾಲ್ಯದಿಂದ ನಮ್ಮ ಪರಿಚಯ. ಅದಕ್ಕೆ ಏಕವಚನದಲ್ಲಿ ಮಾತಾಡಿಕೊಂಡು ರೂಢಿಯಾಗಿದೆ. ಈಗಿನ ಹುಡುಗರಿಗೆ ಅದೆಲ್ಲಾ ಹಿಡಿಸೊದಿಲ್ಲ ಅವಮಾನವಾಯ್ತು ಅಂತ ತಿಳಕೋತಾರೆ ಎಂದು ಈ ಕ್ಷಮಾಯಾಚನೆಯ ಭಂಗಿಯಲ್ಲಿ ಹೇಳಿದರು. ಅದಕ್ಕೆ ದೇವಯ್ಯನ ಪ್ರತ್ಯುತ್ತರ ಅಪ್ಪಯ್ಯನಾ ನಾನು ಏನೋ ಅಂತಿದ್ದೆ ತಪ್ಪಾಯ್ತು. ಅವರು ಮೇಗರವಳ್ಳಿ ಮಿಷನ್ ಸ್ಕೂಲಿಗೆ ಹೋದರು, ರೆವರೆಂಡ್ ಲೇಕ್‌ಹಿಲ್ ದೊಡ್ಡ ಪಾದ್ರಿ ಬರ್ತಾರಂತೆ. ಅವರು 'ಬ್ರಾಹ್ಮಣ ಕೂನಿಯ ಶೂದ್ರಮೀನು' ಹರಿಕಥೆ ಮಾಡ್ತಾರಂತೆ"[2] ಎಂದು ಹೇಳುತ್ತಾನೆ.

ಮಂಜಭಟ್ಟರು ದೇವಸ್ಥಾನದಲ್ಲಿ ಪೂಜೆಯನ್ನು ಮುಗಿಸಿ ಸತ್ಯನಾರಾಯಣ ವ್ರತದ ಕಥೆಯನ್ನು ಪ್ರಾರಂಭ ಮಾಡುತ್ತಿದ್ದಂತೆಯೇ ಶ್ರೋತೃ ಭಕ್ತರ ಏಕಾಗ್ರತೆಗೆ ಒಂದಿನಿತೂ ಭಂಗಬಾರದಂತೆ ಅವರ ಗಮನವನ್ನು ಸ್ವಲ್ಪವೂ ಸೆಳೆಯದೇ ಮಂಜಭಟ್ಟರ ಧರ್ಮ ಶ್ರವಣ ರಂಗದಿಂದ ಧರ್ಮು, ಕಾಡು, ತಿಮ್ಮು, ಮೊದಲೇ ಪಾರಾಗಿದ್ದರು. ಶ್ರೋತೃ ವರ್ಗದವರಲ್ಲಿ ಮುಖ್ಯವಾದ ದೇವಯ್ಯ ಮುಕುಂದಯ್ಯನ ಕಿವಿಯಲ್ಲಿ ಈ ಅಜ್ಜಿ ಪುರಾಣ ಯಾರು ಕೇಳ್ತಾರೊ? ಕೂತು ಕೂತು ಕಾಲೆಲ್ಲಾ ಮರಗಟ್ಟಿ ಹೋಗಿದೆ ಎಂದು ಎದ್ದು ಹೋಗುವ ವರ್ತನೆಯಲ್ಲಿಯೂ ವೈದಿಕ ಕ್ರಿಯಾಚರಣೆಗಳ ಬಗೆಗೆ ಪ್ರತಿರೋಧವನ್ನು ಗುರುತಿಸ ಬಹುದಾಗಿದೆ. ಹಾಗೆಯೇ ಗಡ್ಡದಯ್ಯ-ದೇವಯ್ಯ ಮತ್ತು ದೇವಯ್ಯ-ಮುಕುಂದಯ್ಯರ ಸಂಭಾಷಣೆಯಲ್ಲಿಯೂ ಪುರೋಹಿತಶಾಹಿಯ ಅನಾಚಾರಗಳನ್ನು ಕುರಿತ ಟೀಕೆ ಪ್ರಕಟವಾಗುತ್ತದೆ.

'ಸನ್ಯಾಸಿಯು ಹಿಂದೂ ಮತ, ಜಾತಿಭೇದ, ಮತಾಚಾರ, ಮೌಢ್ಯ, ಪುರೋಹಿತ ವರ್ಗದಿಂದ ಇತರರಿಗೆ ಆಗುತ್ತಿರುವ ಅನ್ಯಾಯ ಮತ್ತು ಅಪಚಾರಗಳನ್ನು ಕುರಿತು ದೇವಯ್ಯನ ಕಂಡನೆ ಮತ್ತು ಟೀಕೆಗಳಲ್ಲಿ ಬಹಭಾಗವನ್ನು ಒಪ್ಪಿಕೊಂಡಿದ್ದು ಮಾತ್ರವಲ್ಲದೆ, ದೇವಯ್ಯನಿಗಿಂತಲೂ ಸಮರ್ಥವಾಗಿ ಸ್ವಾರಸ್ಯವಾಗಿ, ನಿದರ್ಶನ ಪೂರ್ವಕವಾಗಿ ಅವುಗಳನ್ನು ವಿಸ್ತರಿಸಿದ್ದರು. ಆತನ ತೀಕ್ಷ್ಣ ವಿಡಂಬನೆಗೂ ನಿಶಿತ ಹಾಸ್ಯಕ್ಕೂ ವಶರಾಗಿ ದೇವಯ್ಯ ಮುಕುಂದಯ್ಯ ಇಬ್ಬರೂ ಒಮ್ಮೊಮ್ಮೆ ಬಿದ್ದು ಬಿದ್ದು ನಕ್ಕಿದ್ದರು. ಆದರೆ ಯಾವಾಗ ವೇದಾಂತ ತತ್ವಗಳ ಆಧರಿಸಿ ಹಿಂದೂ ಧರ್ಮದ ಮತ್ತು ಭಾರತೀಯ ದೃಷ್ಟಿಯ

ಸಮರ್ಥನೆಗೆ ಕೈ ಹಾಕಿದನೋ ಆಗ ಶ್ರೋತೃಗಳಿಬ್ಬರೂ ಒಂದು ಮನೋಭೂತಿಯ ಅನುಭವದಲ್ಲಿ ದಂಗಾಗಿ ಹೋಗಿದ್ದರು. ಹಿಂದೂಗಳಾಗಿದ್ದ ಅವರು ಅದೆಂತಹ ಮಹೋನ್ನತ ದಿವ್ಯದರ್ಶನದ ಆಸ್ತಿಗೆ ಹಕ್ಕುದಾರರಾಗಿದ್ದಾರೆ ಎಂಬುದನ್ನು ಆತನು ವಿವರಿಸಿದಾಗ, ಈ ಮಂಟಪದಲ್ಲಿ ಒಂದು ದಿವ್ಯದ ಆರಾಧನೆ ಸಾನಿಧ್ಯವೇ ಸೃಷ್ಟಿಯಾಗಿತ್ತು.'[೮]

ವೈದಿಕ ಸಂವೇದನೆಯು ಅನೇಕ ನೆಲೆಗಳಲ್ಲಿ ಕೆಳವರ್ಗಗಳಿಗೆ ಮಾಡಿದ ಅನ್ಯಾಯವನ್ನು, ಅಪಚಾರವನ್ನು ಮತ್ತು ಹಿಂದೂಧರ್ಮದ ಅತ್ಯಂತ ಮಾನವೀಯ ವೇದಾಂತ ತತ್ವಗಳ ಪರಿಚಯವನ್ನು ಮಾಡಿಕೊಡುವುದರ ಮುಖೇನ ಪುರೋಹಿತಶಾಹಿಯು ಹಿಂದೂ ಧರ್ಮದಲ್ಲಿನ ಅನೇಕ ಮಾನವೀಯ ಮೌಲ್ಯಗಳನ್ನು ತಿರುಚಿ ಅಮಾನವೀಯಗೊಳಿಸಿದುದರ ಬಗೆಗೆ ತಿಳುವಳಿಕೆಯನ್ನು ನೀಡುತ್ತಾನೆ. ಇದರ ಹಿಂದೆ ವೈದಿಕಶಾಹಿಯ ಬಗೆಗಿನ ವಿಮರ್ಶೆಯನ್ನು ಕಾಣುತ್ತೇವೆ.

ಸ್ವಾಮಿ ವಿವೇಕಾನಂದರು ಚಿಕಾಗೋದಿಂದ ಭರತಖಂಡಕ್ಕೆ ಬಂದು ಸ್ಥಳೀಯ ಮತ್ತು ಕ್ರೈಸ್ತಾದಿ ಪುರೋಹಿತರ ಹಿಡಿತಗಳಿಂದ ಸಾಮಾನ್ಯ ಜನತೆ ಬಿಡುಗಡೆ ಪಡೆಯುವಂತೆ ಭರತಖಂಡವನ್ನೆಲ್ಲಾ ಸಂಚರಿಸಿ, ಹೊಸತೊಂದು ಯುಗಶಕ್ತಿಯನ್ನು ಎಚ್ಚರಿಸುತ್ತಾರೆಂಬ ಮಾತುಗಳಲ್ಲಿಯು ಈ ಬಗೆಯ ಪ್ರತಿ ರೋಧವನ್ನು ಕಾಣಬಹುದು.

'ಮೇಗರವಳ್ಳಿ ಮಿಷನ್ ಸ್ಕೂಲಿನ ಕಟ್ಟಡದ ಪ್ರಾರಂಭೋತ್ಸವದ ಉದ್ಘಾಟನೆಯ ಸಂದರ್ಭದಲ್ಲಿ ಬೆಟ್ಟಳ್ಳಿ ದೇವಯ್ಯಗೌಡರ ಕ್ರೈಸ್ತ ಮತಾಂತರದ ಸಂದರ್ಭವೂ ಸ್ಥಳೀಯ ಮತ್ತು ಕ್ರೈಸ್ತ ಪುರೋಹಿತ ಶಾಹಿಯ ಮತೀಯ ಒಳತಂತ್ರಗಳನ್ನು ಅತ್ಯಂತ ಮಾರ್ಮಿಕವಾಗಿ ತಿಳಿಸುತ್ತದೆ. ಕ್ರೈಸ್ತ ಪುರೋಹಿತನೊಬ್ಬ ದೇವಯ್ಯನಂತಹ ಶೂದ್ರ ಜನಾಂಗದ ಯುವಕನನ್ನು ಮತಾಂತರಗೊಳಿಸಲು ಬ್ರಾಹ್ಮಣರ ಹಿಂದೂ ಧರ್ಮದ ದುರ್ಮುಷ್ಟಿಯಿಂದ ಆಗಿರುವ ಅನರ್ಥಗಳನ್ನು ವಿಶದಪಡಿಸುವುದರೊಂದಿಗೆ, ಅಂತದ್ದೇ ಮತ್ತೊಂದು ಕ್ರೈಸ್ತ ಪುರೋಹಿತಶಾಹಿಯ ಹಿಡಿತಕ್ಕೆ ಗುರಿಪಡಿಸುವ ಪ್ರಕ್ರಿಯೆಯಾಗಿದೆ. ಇಲ್ಲಿ ಕುವೆಂಪು ಸ್ಥಳೀಯ ಮತ್ತು ಕ್ರೈಸ್ತ ಪುರೋಹಿತಶಾಹಿಯ ತಂತ್ರಗಳನ್ನು ಬಯಲುಗೊಳಿಸುತ್ತಾರೆ. ಹಾಗೆಯೇ ಕ್ರೈಸ್ತ ಮತ ಪ್ರಚಾರಕರಾದ ಪಾದ್ರಿಗಳು ಬ್ರಿಟೀಷ್ ಸರ್ಕಾರದ ರಾಜಕೀಯ ಬಲ ಮತ್ತು ಪ್ರತಿಷ್ಠೆ ಹಾಗೂ ವೈದ್ಯ ಕೀಯ ಸೇವೆಗಳ ಬಲೆಯೊಡ್ಡಿ ಸ್ಥಳೀಯ ಪುರೋಹಿತಶಾಹಿಯ ಹಿಡಿತಕ್ಕೆ ಸಿಲುಕಿ ಅಜ್ಞಾನ ಕುಕ್ಷಿ ಗಳಾಗಿರುವ ಶೂದ್ರ ವರ್ಗವನ್ನು ಮತಾಂತರಗೊಳಿಸುವ ಪ್ರಕ್ರಿಯೆಗೆ ತೊಡಗುತ್ತಾರೆ. ಕ್ರೈಸ್ತ ಪುರೋಹಿತ ಶಾಹಿಯನ್ನು ದೇವಯ್ಯ ವಿಫಲಗೊಳಿಸುವ ಪ್ರಕ್ರಿಯೆಯಲ್ಲೂ ಪುರೋಹಿತಶಾಹಿಯ ಬಗೆಗಿನ ಪ್ರತಿರೋಧವನ್ನು ಕಾಣುತ್ತೇವೆ.'[೯]

ಕಾನೂರು ಹೆಗ್ಗಡಿತಿ ಕಾದಂಬರಿಯಲ್ಲಿ ಈ ಎಲ್ಲಾ ಹಿನ್ನೆಲೆಯಿಂದ ನಿರ್ಮಾಣವಾದ ಸ್ಥಳೀಯ ಪ್ರಜ್ಞೆಯಲ್ಲಿಯೂ ಅಂತಹ ಒಂದು ಎಚ್ಚರ ನಿರ್ಮಾಣವಾಗುತ್ತಿರುವುದನ್ನು ಕಾಣಬಹುದು. ಹೂವಯ್ಯ ಮತ್ತು ವೆಂಕಪ್ಪಜೋಯಿಸರ ಮುಖಾಮುಖಿಯಲ್ಲಿ ಪುರೋಹಿತಶಾಹಿ ಮತ್ತು ಆಧುನಿಕ ಯುಗಪ್ರಜ್ಞೆಯ ನಡುವೆ ಸಂಘರ್ಷ ಏರ್ಪಡುತ್ತದೆ. ಈ ಸಂಘರ್ಷದ ಹಿಂದೆ ಇಂಗ್ಲೀಷ್ ಶಿಕ್ಷಣದ ಮೂಲಕ ದಟ್ಟವಾದ ವೈಚಾರಿಕತೆ ಮತ್ತು ಭಾರತೀಯ ವೇದಾಂತ ದರ್ಶನದ ಮಾನವೀಯ ಧಾರೆ, ರಾಮಕೃಷ್ಣ ವಿವೇಕಾನಂದರ ಚಿಂತನೆಗಳು ಅಂತರ್ಗತವಾಗಿವೆ. ಕುವೆಂಪುರವರ ಈ ಕಾದಂಬರಿಗಳಲ್ಲಿ ಹೊಸ ಮೌಲ್ಯಗಳ ಸಂಪರ್ಕ ಹಾಗೂ ಸಂಘರ್ಷಗಳ ಮುಖ್ಯ ಚಿಂತನೆಯನ್ನು ವಿಶ್ಲೇಷಿಸಲಾಗಿದೆ. ವೈದಿಕ ಧರ್ಮವು ದೇವರ ಪೂಜೆ ಮಾಡುವುದು, ನಿಮಿತ್ತ ನೋಡುವುದು, ಭವಿಷ್ಯ ಹೇಳುವುದು, ಜಾತಕ ಬರೆಯುವುದು, ಲಗ್ನಕ್ಕೆ ಮುಹೂರ್ತ ಗೊತ್ತುಪಡಿಸುವುದು, ಶೂದ್ರರು ಭೂತಾದಿಗಳಿಗೆ ರಕ್ತದ ಬಲಿ ಕೊಡುವ ಮೊದಲು ಹಣ್ಣುಕಾಯಿ ಮಾಡುವುದು ಮೊದಲಾದ ಅರ್ಥವಿಲ್ಲದ ಮೌಢ್ಯಾಚಾರಗಳನ್ನು, ಭಯ ಭಕ್ತಿಗಳನ್ನು ಹಳ್ಳಿಯವರಲ್ಲಿ ಹುಟ್ಟಿಸಿ ವಂಚಕ ಜೀವನ ನಡೆಸುತ್ತಿದ್ದವರನ್ನು ಕುವೆಂಪುರವರ ಸಂವೇದನೆ ತೀವ್ರವಾಗಿ ಪ್ರತಿರೋಧಿಸಿದೆ. ಈ ಪ್ರತಿರೋಧ ಕಾದಂಬರಿಯ ಉದ್ದಕ್ಕೂ ಹೂವಯ್ಯ ಮತ್ತು ವೆಂಕಪ್ಪ ಜೋಯಿಸರ ನಡುವೆ ನಡೆಯುತ್ತಿರುತ್ತದೆ.

ಚಂದ್ರಯ್ಯಗೌಡರಂತಹ ದೊಡ್ಡ ಕುಟುಂಬವನ್ನು ತನ್ನ ಕುತಂತ್ರಗಳಿಂದ ವಿಘಟಿಸುವುದು ಅಥವಾ ಒಡೆಯುವುದು ಹಾಗೂ ದೇವರು ಧರ್ಮ ಶಾಸ್ತ್ರ ನಿಮಿತ್ತ ಗ್ರಹಚಾರ ಇವುಗಳ ಹೆಸರಿನಲ್ಲಿ ಚಂದ್ರಯ್ಯ ಗೌಡರ ಇಚ್ಛೆಯಂತೆ ವೆಂಕಪ್ಪ ಜೋಯಿಸರು ವರ್ತಿಸುತ್ತಾರೆ. ಎಲ್ಲಕ್ಕಿಂತ ಹೆಚ್ಚಾಗಿ ಸೀತೆಯ ವಿವಾಹದ ಸಂದರ್ಭದಲ್ಲೂ ಶೂದ್ರರಿಗೆ ರಾತ್ರಿವೇಳೆ ನಿಶಾಲಗ್ನವನ್ನು ಇಟ್ಟುಕೊಡುವುದರ ಜೊತೆಗೆ ತಾಳಿ ಕಟ್ಟುವ ಮದುವೆ ಗಂಡು ರಾಮಯ್ಯ ತಲೆ ಸುತ್ತಿ ಬೀಳುವ ಸಮಯದಲ್ಲಿ ಹೂವಯ್ಯನ ಮೇಲಿನ ಪ್ರತಿಕಾರವೋ ಎಂಬಂತೆ ವೆಂಕಪ್ಪಜೋಯಿಸ ತಾನೇ ಸೀತೆಯ ಕುತ್ತಿಗೆಗೆ ತಾಳಿ ಬಿಗಿಯುವಂತಹ ಹೇಯ ಕೃತ್ಯಕ್ಕೆ ಕೈ ಹಾಕುತ್ತಾನೆ. ಹಾಗೆಯೇ ಶೂದ್ರಸಮುದಾಯದಲ್ಲಿ ಎಚ್ಚರಗೊಳ್ಳುತ್ತಿರುವ ನವವೈಚಾರಿಕತೆಯನ್ನು ಸಹಿಸಲಾರದ ವೆಂಕಪ್ಪಜೋಯಿಸರ ಹುನ್ನಾರಗಳು ಪರಿಚಯಿಸಲ್ಪಡುತ್ತವೆ.

ಈಗಿನ ವಿದ್ಯಾಭ್ಯಾಸ ಹುಡುಗರನ್ನು ಹಾಳುಮಾಡಿಬಿಡುತ್ತದೆ. ಇವನಿಗೆ ದೇವರು ದಿಂಡಿರು ಭಕ್ತಿಗಿಕ್ತಿ ಎಲ್ಲ ನಿರ್ನಾಮ. ಜೊತೆಗೆ ನೂರಾರು ಹವ್ಯಾಸಗಳನ್ನು ಬೇರೆ ಕಲಿಯುತ್ತಾರೆ. ನಿನ್ನ ಮನೆ ಜಮೀನು ಉಳಿಯಬೇಕಾದರೆ ಅವರ ಓದು ನಿಲ್ಲಿಸಿ, ಮದುವೆ ಗಿದುವೆ ಮಾಡಿ ಕೆಲಸಕ್ಕೆ ಹಚ್ಚು. ಸಂಸಾರ ತಲೆಗೆ ತಾಗಿದರೆ ಆಗ ಬುದ್ಧಿ ಬರುತ್ತದೆ. ಅದಕ್ಕೆ ಚಂದ್ರಯ್ಯಗೌಡರು ಹಾಂಗೆ ಮಾಡೋದೆ ಸೈ ಅಂತ ಕಾಣ್ತದೆ. ಈಗ ನೋಡಿ ಆ ಹೂವಯ್ಯ ಅವನ ದೆಸೆಯಿಂದ ನಮ್ಮ ರಾಮಯ್ಯ ಇಬ್ಬರೂ ಸೇರಿ ದೈಯ್ಯ ದ್ಯಾವರು

ಭೂತ ಗೀತ ಜಕ್ಕಣಿ ಗಿಕ್ಕಣಿ ಒಂದೂ ಬ್ಯಾಡಾ ಅಂತ ಹೇಳಿ ಬೊಯ್ಯೋಕೆ ಸುರುಮಾಡಿದ್ದಾರೆ. ಆ ಹೂವಯ್ಯನಂತೂ ಅದೆಂತದೊ ಭಗವದ್ಗೀತೆಯಂತೆ ಉಪ್ನಿಷತ್ತಂತೆ ಓದಿ ತಲೆಕೆಡಿಸಿಕೊಂಡು ಕೂತಿದ್ದಾನೆ. ಮನೆಗೆ ಬಂದವನೂ ಒಂದು ಆಳು ಕಾಳಿನ ಕೆಲಸವನ್ನು ನೋಡೋದಿಲ್ಲ. ಉಪ್ಪರಿಗೆ ಮೇಲೆ ಓದುತ್ತಾ ಕುಳಿತುಬಿಡುತ್ತಾನೆ.

'ಹೌದು ದುಡಿದು ಹಾಕುವವರು ಒಬ್ಬರಿದ್ದರೆ ಮತ್ತೇನು ಮಾಡುತ್ತಾನೆ. ಅವನ ಪಾಲು ಅವನಿಗೆ ಕೊಟ್ಟು ಬೇರೆ ಹಾಕು. ಆಗೆಲ್ಲಾ ಸರಿಯಾಗ್ತದೆ. ಈ ಶೂದ್ರ ಮಕ್ಕಳಿಗೆಲ್ಲಾ ಉಪನಿಷತ್ತು, ಭಗವದ್ಗೀತೆ ಗಂಧವಾದರೂ ಗೊತ್ತಾಗುತ್ತದೆಯೇ? ನಮಗೇ ಗೊತ್ತಾಗುವುದಿಲ್ಲ. ಗೌಡರು ನಿಮಗೆ ಗೊತ್ತಾಗದೆ ಏನು? ಎಂದರು. ಹಾಗಲ್ಲ ಚಂದ್ರಯ್ಯ ನಿನಗೆ ಗೊತ್ತಿಲ್ಲ. ಎಂತೆಂಥ ಆಚಾರ್ಯರೆ ಅವುಗಳಿಗೆ ವ್ಯಾಖ್ಯಾನ ಬರೆಯಲು ತಿಣುಕಿಬಿಟ್ಟಿದ್ದಾರೆ. ಅದರಲ್ಲಿಯೇ ಏಕಮತವಿಲ್ಲ. ಈ ಶೂದ್ರ ಮಕ್ಕಳಿಗೆಲ್ಲಾ ಗೊತ್ತಾಗುತ್ತದೆಯೇ? ಅವನ್ನೆಲ್ಲ ಓದಿ ಮನೆ ಹಾಳು ಮಾಡಿಕೊಳ್ಳುತ್ತಾರಷ್ಟೆ.'[೧೦] ಪಾರಂಪರಿಕವಾಗಿ ಶೂದ್ರ ವರ್ಗವನ್ನೇ ಶಿಕ್ಷಣದಿಂದ ವಂಚಿಸಿದ್ದ ಪುರೋಹಿತವರ್ಗ ಈಗಲೂ ಅಂತಹುದೇ ಆಶಯವನ್ನು ಹೊಂದಿದೆ ಎಂಬುದನ್ನು ಈ ಮಾತುಗಳು ಮನದಟ್ಟು ಮಾಡುತ್ತವೆ.

ಅಮಾನುಷವಾದ ವರ್ಣವ್ಯವಸ್ಥೆಯನ್ನು ಹುಟ್ಟುಹಾಕಿ ಆ ಮೂಲಕ ಕೆಳ-ತಳ ವರ್ಗಗಳನ್ನು ನಿರ್ಮಾಣ ಮಾಡಿ, ಅವರನ್ನು ಶಿಕ್ಷಣದಿಂದ ವಂಚಿಸಿದ್ದಲ್ಲದೆ, ಅನೇಕ ಮೌಢ್ಯಗಳಿಗೆ ಗುರಿ ಮಾಡಿದ ವೈದಿಕ ಧರ್ಮ, ಈ ಕೆಳವರ್ಗಗಳ ನವಪ್ರಜ್ಞೆಯನ್ನು, ವೈಚಾರಿಕತೆಯನ್ನು ಸಹಿಸಲಾಗದೆ, ಓದಿದರೆ ಮನೆ ಹಾಳು ಎಂಬ ವೇದ ವಾಕ್ಯವನ್ನು ಜೋಯಿಸರ ಬಾಯಿಂದ ಹೇಳಿಸುತ್ತಾರೆ. ಹೂವಯ್ಯ ವೆಂಕಪ್ಪ ಜೋಯಿಸರ ನಡುವಿನ ಸಂಘರ್ಷದ ಮತ್ತೊಂದು ನೆಲೆಯನ್ನು ನಾವಿಲ್ಲಿ ನೋಡಬಹುದು.

ಜೋಯಿಸರಿಗೆ ಜಗುಲಿಯ ಮೇಲೆ ಮಲಗಿದ್ದ ಹೂವಯ್ಯನನ್ನು ನೋಡಿದ ಕೂಡಲೇ ಒಂದು ವಿಧವಾದ ಜಿಗುಪ್ಸೆಯಾಯಿತು. ಏಕೆಂದರೆ ಅವನು ತಮ್ಮ ವ್ಯಾಪಾರಕ್ಕೆ ಮೂಲ ಧನದಂತಿದ್ದ ಹಳ್ಳಿಗರ ಮೌಢ್ಯವನ್ನು ನಿವಾರಿಸಲು ಮಾಡುತ್ತಿದ್ದ ಪ್ರಯತ್ನವು ಜೋಯಿಸರ ಭಾಗಕ್ಕೆ ಅಸಹನೀಯವಾಗಿತ್ತು. ಅದೂ ಅಲ್ಲದೆ ಬ್ರಾಹ್ಮಣರಾದ ತಮಗಿಂತಲೂ ಶೂದ್ರನಾದ ಅವನಿಗೆ ಉಪನಿಷತ್ತು, ಭಗವದ್ಗೀತೆ ಮೊದಲಾದವುಗಳ ಪರಿಚಯವೂ ಜ್ಞಾನವೂ ಹೆಚ್ಚಾಗಿದೆ ಎಂಬುದೂ ಕಾರಣವಾಗಿತ್ತು. ಹೂವಯ್ಯನ ಸ್ಥಿತಿಯನ್ನು ಕಂಡು ಧೈರ್ಯಗೊಂಡ ಜೋಯಿಸರು ಬೆನ್ನು ನೋವು ಹೋಗುವಂತೆ ಮಂತ್ರ ಮಾಡುವುದಾಗಿಯೂ, ಪೂಜೆ ಮಾಡುವುದಾಗಿಯೂ, ಗ್ರಹಗತಿಯನ್ನು ಸರಿಮಾಡುವುದಾಗಿಯೂ, ಶ್ಯಾಮಯ್ಯ ಗೌಡರೊಡನೆ ಹೇಳಿದರು. ಗೌಡರು ಮರುಮಾತಾಡದೆ ಸಮ್ಮತಿಸಿ, ಹೂವಯ್ಯನಿಗೆ ಜೋಯಿಸರ ಅನುಗ್ರಹದ ವಿಚಾರವಾಗಿ ಹೇಳಿದನು. ಹೂವಯ್ಯ ನಕ್ಕು ಹಾಸ್ಯ ಮಾಡಿದನು. ಜೋಯಿಸರಿಗೂ

ಅವನಿಗೂ ಬಿಸಿಬಿಸಿಯಾಗಿ ನಾಲ್ಕು ಮಾತಾಯಿತು. ಜೋಯಿಸರಿಗೆ ಮುಖಭಂಗವಾಯಿತು. ಜೋಯಿಸರು ಸಿಟ್ಟಾಗಿ 'ಹೂವಯ್ಯ ನಿನಗೆ ಇದು ಒಳ್ಳೆಯದಲ್ಲ. ಹಿಂದಿನಿಂದ ನಡೆದುಬಂದ ಆಚಾರ, ದೇವರು, ವೇದ ಶಾಸ್ತ್ರಗಳನ್ನೆಲ್ಲಾ ಅಲ್ಲಗಳೆಯುವ ನಿನಗೆ ಕೇಡು ತಪ್ಪಿದ್ದಲ್ಲ.' ಎಂದರು. ಹೂವಯ್ಯನು ನೀವು ತಿಳಿದುಕೊಂಡವರೆಂದು ಹಳ್ಳಿಯವರಿಗೆ ಮೌಢ್ಯವನ್ನೇ ಉಪದೇಶ ಮಾಡಿ, ನಿಮಿತ್ತ ಹೇಳಿ, ತಾಯಿತ ಕಟ್ಟಿ, ಸತ್ಯನಾರಾಯಣ ವ್ರತ ಮಾಡಿಸಿ, ದೆವ್ವ ಬಿಡಿಸಿ, ಇದರಿಂದ ಹೊಟ್ಟೆ ಹೊರೆದುಕೊಳ್ಳುತ್ತೀರ? ಟ್ರಂಕು ತಗುಲಿ ನೋವಾಗಿದ್ದರೆ ಔಷಧಿ ಮಾಡಿ ಎಂದು ಹೇಳುವ ಬದಲು ಬೂದಿ ಕುಂಕುಮ ಹಚ್ಚಿ, ಮಂತ್ರ ಹಾಕಿಸಿ ಎಂದು ಹೇಳುತ್ತೀರಲ್ಲ? ಇದು ಯಾವ ತತ್ವಶಾಸ್ತ್ರದಲ್ಲಿ ಹೇಳಿದೆ? ಹಾಗೆ ಹೇಳಿರುವ ಗ್ರಂಥಗಳಿದ್ದರೆ ಅವು ವಂದನೆಗೆ ಯೋಗ್ಯವಾದುವೆ? ನಿಮ್ಮ ಬೋಧನೆಯಿಂದ ಎಷ್ಟು ಜನರು ರೋಗಕ್ಕೆ ಸರಿಯಾಗಿ ಮದ್ದು ಮಾಡದೆ ಬರಿಯ ಬೂದಿ ವಿಭೂತಿಗಳನ್ನು ಹಚ್ಚಿಕೊಂಡು ಪ್ರಾಣ ಕಳೆದು ಕೊಳ್ಳುತ್ತಿದ್ದಾರೆ ಎಂದು ಚಾಟಿ ಏಟು ನೀಡುತ್ತಾನೆ.

**ಕೊನೆ ಟಿಪ್ಪಣಿಗಳು**


೧) ಡಾ. ಉದ್ದಂಡಯ್ಯ, ಕುವೆಂಪು ಕಥನ, ಅಧ್ಯಯನ ಮಂಡಲ, ಬಸವನಗುಡಿ, ೨೦೦೯ಪುಟ ೩೮

೨) ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ೧೯೯೯, ಪುಟ ೬೫೧

೩) ಅದೇ,ಪುಟ,೬೯೮

೪) ಅದೇ,ಪುಟ,೩೩೨

೫) ಕುವೆಂಪು, ವಿಚಾರ ಕ್ರಾಂತಿಗೆ ಆಹ್ವಾನ, ಉದಯರವಿ ಪ್ರಕಾಶನ, ೧೯೯೮, ಪುಟ ೪೦-೪೨

೬) ಕುವೆಂಪು, ಪ್ರೇತಕ್ಯೂ, ಉದಯರವಿ ಪ್ರಕಾಶನ, ಮೈಸೂರು, ೧೯೬೭, ಪುಟ ೫೦

೭) ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ಪುಟ ೪೩೨

೮) ಮಲೆಗಳಲ್ಲಿ ಮದುಮಗಳು, ೧೯೯೮, ಪುಟ ೪೪೧

೯) ಕುವೆಂಪು ಕಥನ, ಉದ್ದಂಡಯ್ಯ, ೨೦೦೯, ಪುಟ ೬೬

೧೦) ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ೧೯೯೨, ಪುಟ ೬೭

# ಅಧ್ಯಾಯ ೪

# ಕುವೆಂಪು ಕಾದಂಬರಿಗಳಲ್ಲಿನ ಬಾಲಪ್ರಪಂಚ ಹಾಗೂ ಸುಧಾರಣಾವಾದಿ ನೆಲೆಗಳು

೧೯ ಮತ್ತು ೨೦ನೇ ಶತಮಾನದ ಭಾರತದ ಸಾಂಸ್ಕೃತಿಕ ಬದುಕು ಯೂರೋಪಿನ ಸಂಸ್ಕೃತಿ, ನಾಗರಿಕತೆ, ಕೈಗಾರೀಕರಣ, ಪಾಶ್ಚಾತ್ಯ ಶಿಕ್ಷಣಪದ್ಧತಿ ಇತ್ಯಾದಿಗಳ ಪ್ರಚೋದನೆಯಿಂದ ಅನೇಕ ಮಾರ್ಪಾಟುಗಳಿಗೆ ಒಳಗಾಗಿದೆ. ಭಾರತದ ಹಳ್ಳಿಗಳ ಮೂಲೆ ಮೂಲೆಗಳಲ್ಲಿ ದೇಶೀಯ ಪರಕೀಯ ಸಂಸ್ಕೃತಿಗಳ ನಡುವೆ ಸಂಘರ್ಷಗಳು ಕಂಡುಬಂದವು. ಈ ಸಾಂಸ್ಕೃತಿಕ ತಲ್ಲಣಗಳಲ್ಲಿ ಪರಕೀಯ ಶಕ್ತಿಗಳ ಧಾರೆ ಭಾರತೀಯ ಜನಜೀವನವನ್ನು ಒಂದು ಬಗೆಯ ವಿಲಕ್ಷಣ ಪ್ರಭಾವಕ್ಕೆ ಒಳಪಡಿಸಿತು. ನಮ್ಮ ಸಾಮಾಜಿಕ, ರಾಜಕೀಯ, ಧಾರ್ಮಿಕ ಬದುಕಿನಲ್ಲಿ ಹೊಸ ವಿಚಾರ ಮತ್ತು ಆಲೋಚನೆಗಳ ಗಾಳಿ ಬೀಸ ತೊಡಗಿ ಅನೇಕ ಬದಲಾವಣೆಗಳಿಗೆ ನಾಂದಿಯಾಯಿತು.

'ಆಗತಾನೆ ಹಳೆಯ ತರಹದ ಕೂಲಿ ಮಠಗಳ ಕಾಲವು ಹಳೆಯ ವಿದ್ಯಾಭ್ಯಾಸ ಪದ್ಧತಿಯೂ ಮುಕ್ತಾಯಗೊಂಡು ಆಂಗ್ಲೇಯರ ಆಡಳಿತ ರೀತಿಯ ಇಂಗ್ಲೀಷಿನ ಪ್ರಭಾವವೂ ಮೊಳೆಯುತ್ತಿದ್ದ ಸಂಧಿ ಸಮಯ. ಮಲೆನಾಡಿನ ಆ ಹೊಸ ಪ್ರಭಾವದ ಮುಂಬೆಳಕನ್ನು ಮೊತ್ತ ಮೊದಲು ತರುವುದರಲ್ಲಿ ಕ್ರೈಸ್ತ ಪಾದ್ರಿಗಳ ಕಾರ್ಯವು ಗಣನೀಯವಾಗಿತ್ತು; ಶ್ಲಾಘನೀಯವಾಗಿತ್ತು. ತಮ್ಮ ಮತಕ್ಕೆ ಜನರು ಸೇರಿಕೊಳ್ಳುವ ಧಾರ್ಮಿಕ ಪ್ರಯತ್ನಕ್ಕೆ ಪೀಠಿಕೆಯಾಗಿತ್ತು. ಈ ಲೌಕಿಕ ಸೇವಾಕರ್ಮ. ಸಾಮಾನ್ಯ ಜನ ಬಹುಕಾಲ ದಿಂದಲೂ ಹಿಂದೂ ಧರ್ಮದ ಹೆಸರಿನಲ್ಲಿ ಬ್ರಾಹ್ಮಣರು ಒಡ್ಡಿದ್ದ ಮೂಢ ಮತಾಚಾರಗಳ ಕುಣಿಕೆಗೆ ಸಿಕ್ಕು ಬಿದ್ದಿದ್ದರು. ಅವರನ್ನು ಆ ಕುಣಿಕೆಯಿಂದ ತಪ್ಪಿಸಿ ರಕ್ಷಿಸುವ ನೆವದಲ್ಲಿ ಕ್ರೈಸ್ತ ಪಾದ್ರಿಗಳು ತಮ್ಮ ಮತದ ಬಲೆಯನ್ನು ಬೀಸಿ ಅದರೊಳಕ್ಕೆ ಹಾರಿ ಬೀಳುವ ಪ್ರಾಣಿಗಳನ್ನು ಭಕ್ಷಿಸುವ ಅಥವಾ ಅವರ ರೀತಿಯಲ್ಲಿ ರಕ್ಷಿಸುವ ಸನ್ನಿಯನ್ನಿಟ್ಟುಕೊಂಡಿದ್ದರು. ಮಂಡಗದ್ದೆಯಲ್ಲಿ ಹೆರಿಗೆ ಆಸ್ಪತ್ರೆ ಸ್ಥಾಪಿಸಿದಂತೆ, ತೀರ್ಥಹಳ್ಳಿ ದೇವಾಂಗಿ ಮೊದಲಾದೆಡೆಗಳಲ್ಲಿ ಸ್ಕೂಲುಗಳನ್ನೂ ಸ್ಥಾಪಿಸಿದರು. ಮಲೇರಿಯಾದಲ್ಲಿ ನರಳಿ ನೂರಕ್ಕೆ ತೊಂಬತ್ತೊಂಬತ್ತರಷ್ಟು ಬಸುರಿ-ಬಾಣಂತಿ ಸಾವನ್ನಪ್ಪುತ್ತಿದ್ದ ತರುಣ ವಯಸ್ಸಿನ ಮಾತೆಯರನ್ನು ಕಾಪಾಡಿ ತಾವು ಕರುಣೆಯ ಅವತಾರವಾಗಿದ್ದ ಯೇಸುಕ್ರಿಸ್ತನ ಅನುಯಾಯಿಗಳೆಂಬುದನ್ನು ಪ್ರತ್ಯಕ್ಷ ನಿದರ್ಶನದಿಂದ ತೋರಿಸಿಕೊಟ್ಟು, ಜನರ ಅನುರಾಗ ವಿಶ್ವಾಸಗಳನ್ನು, ಕೃತಜ್ಞತೆಯನ್ನು ಸೂರೆಗೊಂಡು ಅದನ್ನು ತಮ್ಮ ಮೂಲೋದ್ದೇಶ ಮತ್ತು ಮೂಲ ಕರ್ತವ್ಯವಾಗಿದ್ದ ಮತಾಂತರಗೊಳಿಸುವ ಕಾರ್ಯಕ್ಕೆ ಉಪ ಯೋಗಿಸಿಕೊಂಡರು'[೧].

ಹಳೆಯ ವಿದ್ಯಾಭ್ಯಾಸ ಪದ್ಧತಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾ ವಸಾಹತು ಶಿಕ್ಷಣ ಕ್ರಮಕ್ಕೆ ಆಕರ್ಷಿತಗೊಳ್ಳುತ್ತಿರುವ ಬಗೆಯನ್ನು ಇಲ್ಲಿ ಕಾಣುತ್ತೇವೆ. ಹೊಸ ಶಿಕ್ಷಣ ತಂದ ಜ್ಞಾನವು ಮಲೆನಾಡಿನ ಬದುಕಿನಲ್ಲಿ ತಂದ ಹೊಸ ಪ್ರಭಾವಗಳೇನೆಂಬುದು ಕುವೆಂಪುರವರ ಕಾದಂಬರಿಯಲ್ಲಿದೆ. ತಮ್ಮ ಮತಕ್ಕೆ ಜನರನ್ನು ಸೇರಿಸಿಕೊಳ್ಳುವ ಆಮಿಷವಾಗಿ ಶಾಲೆ ಮೇಲು ನೋಟಕ್ಕೆ ಕಂಡರೂ ಪುರೋಹಿತಶಾಹಿಯ ಕಬಂಧಬಾಹುಗಳ ಹಿಡಿತದಿಂದ ಬಿಡಿಸಿಕೊಳ್ಳಲು ಹೊಸ ಶಾಲೆ ಹೊಸ ಎಚ್ಚರವನ್ನು ಮೂಡಿಸಿತು ಎಂಬ ವಿಚಾರವು ಕಾದಂಬರಿಯ ಉದ್ದಕ್ಕೂ ಕಾಣುತ್ತದೆ.

ನೂತನ ವಿದ್ಯಾಭ್ಯಾಸ ಪದ್ಧತಿ ಔಪಚಾರಿಕ ಶಿಕ್ಷಣ ವ್ಯವಸ್ಥೆ ಭಾರತೀಯರಿಗೆ ಲಭಿಸಿದ್ದು ಇಂಗ್ಲೀಷ ರಿಂದ. ಇವತ್ತಿಗೂ ಇಂಗ್ಲೀಷ್ ಶಿಕ್ಷಣ ಪದ್ಧತಿಯೇ ನಮ್ಮಲ್ಲಿ ಮುಂದುವರಿಯುತ್ತಿದೆ. ಪರಂಗಿಗಳು ತಮ್ಮ ಲಾಭಕ್ಕಾಗಿ ನೀಡಿದ ಶಿಕ್ಷಣವನ್ನು ಇಂದು ನಾವು ನಮ್ಮ ಲಾಭಕ್ಕಾಗಿ ಬಳಸಿಕೊಳ್ಳುತ್ತಿದ್ದೇವೆ. ನಮ್ಮ ಸಂಪ್ರ ದಾಯಬದ್ಧ ವೈದಿಕ ಗುರುಕುಲ ಶಿಕ್ಷಣ ಪದ್ಧತಿ ಸ್ವಚ್ಛಂದವಾಗಿದ್ದರೂ ಇಷ್ಟೊಂದು ಸಂಕೀರ್ಣವೂ ಬಹುಪಯೋಗಿಯೂ ಆಗಿರಲಿಲ್ಲವೆಂದೇ ವಾದಿಸಬಹುದು. ಶಿಕ್ಷಣದಲ್ಲಿ ಸುವ್ಯವಸ್ಥೆಯನ್ನು ಸಾಕಾರಗೊಳಿ ಸಿದ ಕ್ರೈಸ್ತ ಪಾದ್ರಿಗಳ ಅಲ್ಪ ಸೇವೆಯನ್ನು ನಾವಿಲ್ಲಿ ನೆನೆಯಬಹುದು. ಮಲೆಗಳಲ್ಲಿ ಮದುಮಗಳು ಕಾದಂಬರಿಯ ಅಂತಕ್ಕನ ಕಾಫಿ ಹೋಟಲ್, ಇಸ್ಕೂಲು ಮನೆಯಾಗಿ ಪರಿವರ್ತನೆಯಾದುದು, ಕ್ರೈಸ್ತ ಪಾದ್ರಿ ಜೀವರತ್ನಯ್ಯ ಚೀಂಕ್ರ ಸೆರೆಗಾರನ ನೆರವು ಪಡೆದು ಹೊಸ ಶಾಲೆಯನ್ನು ನಿರ್ಮಾಣ ಮಾಡಿದ್ದು, ಕಾನೂರು ಹೆಗ್ಗಡಿತಿಯ ಹೂವಯ್ಯ ರಾಮಯ್ಯರು ಮೈಸೂರಿನಿಂದ ವಿದ್ಯಾಭ್ಯಾಸ ಮುಗಿಸಿ ಹಿಂತಿರು ಗಿದ್ದು, ಐಗಳಾದ ಅನಂತಯ್ಯನವರು ಕೂಲಿ ಮಠದಲ್ಲಿ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುವುದು-ಹೀಗೆ ಕುವೆಂಪುರವರು ವಾಸ್ತವಿಕ ಶಿಕ್ಷಣ ಕ್ರಮವನ್ನು ಪ್ರತಿಪಾದಿಸುತ್ತಾ ನವೀನ ಪರಂಪರೆಗೆ ಪ್ರಾಚೀನ ಪರಂಪರೆಯನ್ನು ಬೆಸೆದಿದ್ದಾರೆ. ಸಮಾಜದಲ್ಲಿನ ಶ್ರೇಷ್ಠ ವರ್ಗ ಶೂದ್ರರಿಗೆ, ಶೂದ್ರಾತಿಶೂದ್ರರಿಗೆ ಶಿಕ್ಷಣದ ಹಕ್ಕು ನಿಯಮ ಬಾಹಿರವೆಂದು, ಮಹಾಪಾಪವೆಂದು ಪ್ರತಿಪಾದಿಸಲ್ಪಟ್ಟ ಜನಸಮುದಾಯದ ನಡುವೆಯೇ ಕುವೆಂಪು ಅಕ್ಷರಕ್ರಾಂತಿಯ ಕಹಳೆಯನ್ನು ಮೊಳಗಿಸುತ್ತಾರೆ. ಜ್ಞಾನವೆಂಬುದು ಯಾರೊಬ್ಬರ ಸ್ವತ್ತಲ್ಲ, ಆಕಾಂಕ್ಷೆ ಇರುವವನು ಅದನ್ನು ಪಡೆಯಬಹುದು ಎನ್ನುವ ಶಿಕ್ಷಣದ ಸಾರ್ವತ್ರೀಕರಣಕ್ಕೆ ಕುವೆಂಪು ಅಡಿಗಲ್ಲನ್ನು ಇಟ್ಟಿದ್ದಾರೆ.

ಕುವೆಂಪು ತಮ್ಮ ಕಾದಂಬರಿಗಳ ಮೂಲಕ ಸನಾತನ ಭಾರತದ ಮಾನವೀಯ ಮೌಲ್ಯಗಳನ್ನು, ತತ್ವಗಳನ್ನು, ದರ್ಶನಗಳನ್ನು ಮೂಡಿಸಬಯಸುತ್ತಾರೆ. ಇಂತಹ ಅಮೂಲ್ಯವಾದ ಸಂದೇಶಗಳನ್ನು ಮರೆ ಮಾಚಿ, ಜನತೆಯಲ್ಲಿ ಮೌಢ್ಯತೆವನ್ನು ಬಿತ್ತಿ, ತಮ್ಮ ಸ್ವಾರ್ಥವನ್ನು ಸಾಧಿಸುವ ವ್ಯವಸ್ಥೆಯನ್ನು ರಾಮ ಕೃಷ್ಣರು ಮತ್ತು ವಿವೇಕಾನಂದರಿಂದ ಪ್ರೇರೇಪಣೆಗೊಂಡ ಕುವೆಂಪುರವರ ಕವಿವಾಣಿ ಧಿಕ್ಕರಿಸುತ್ತದೆ.

ಆಧ್ಯಾತ್ಮಿಕತೆಯನ್ನು ಬೋಧಿಸುವುದರ ಜೊತೆಗೆ ನವಪ್ರಜ್ಞೆಯನ್ನು ಸುಳಿಯುವಂತೆ ಮಾಡಲು ಕುವೆಂಪು ಪ್ರಯತ್ನಿಸಿದ್ದಾರೆ. ಸನಾತನ ಸಂಸ್ಕೃತಿಗೆ ಒದಗಿದ ಕಳಂಕಗಳು ಇಲ್ಲವಾಗಿ ಆ ಸಂಸ್ಕೃತಿಯು ನೂತನ ಸಂಸ್ಕಾರಗಳನ್ನು ಪಡೆದು ಗಟ್ಟಿಗೊಳ್ಳಬೇಕೆಂಬ ಆಶಯದಿಂದ ಪರಮಹಂಸ ಮತ್ತು ವಿವೇಕಾನಂದರು ಸರ್ವಧರ್ಮ ಸಮನ್ವಯ ತತ್ವಗಳನ್ನು ಪ್ರಪಂಚದಾದ್ಯಂತ ಸಾರಲು ತೊಡಗಿದ ಕ್ರಿಯೆಯು ಎಲ್ಲಾ ಬಗೆಯ ದಮನಕಾರಿ ನೆಲೆಗಳಿಗೆ ತೋರಿದ ಪ್ರತಿಕ್ರಿಯೆಯಾಗಿದೆ.

ಕ್ರಿ.ಶ ೧೮೯೩ರಲ್ಲಿ ಚಿಕಾಗೋದಲ್ಲಿ ನಡೆದ ಸರ್ವಧರ್ಮ ಸಮ್ಮೇಳನದಲ್ಲಿ ತಟಕ್ಕನೆ ಯಶೋ ಗೋಪುರದ ಶಿಖರಕ್ಕೇರಿ ಆಧ್ಯಾತ್ಮಿಕ ಜಗತ್ತಿನ ಕೇಂದ್ರಮೂರ್ತಿಯಾದರು ಸ್ವಾಮಿ ವಿವೇಕಾನಂದರು. ಎರಡು ವರ್ಷಗಳ ಕಾಲ ಅಮೇರಿಕಾದಲ್ಲಿ ಅನೇಕ ನಗರಗಳಲ್ಲಿ ಸಂಚರಿಸಿ, ಕ್ರೈಸ್ತ ಮತ ಸಂಕುಚಿತ ವಲಯದಲ್ಲಿಯೇ ಬೆಳೆದು ಕುಬ್ಜ ದೃಷ್ಟಿಗಳಾಗಿದ್ದ ಪಾಶ್ಚಾತ್ಯರಿಗೆ ಅಭೂತಪೂರ್ವ ಧೀರೋದ್ಧಾತ ದೃಷ್ಟಿಯ ವೇದಾಂತದ ಸಂದೇಶವಿತ್ತು ಜಯದ ಡಿಂಡಿಮವನ್ನು ಮೊಳಗಿಸಿದರಷ್ಟೆ. ತರುವಾಯ ಅವರು ವೇದಾಂತದ ಆಧ್ಯಾತ್ಮಿಕ ಯೋಗ ಸಾಧನೆಯನ್ನು ಕೈಗೊಳ್ಳಲು ಹಂಬಲಿಸುತ್ತಿದ್ದ ಕೆಲವು ಶಿಷ್ಯ ಶಿಷ್ಯೆಯ ರೊಡನೆ ಸೆಂಟ್ ಲಾರೆನ್ಸ್ ಮಹಾನದಿಯ ಸುವಿಸ್ತೃತ ಜಲರಾಶಿಯ ಮಧ್ಯೆ ಅರಣ್ಯಾವೃತವಾಗಿದ್ದ ಸಹಸ್ರ ದೀಪೋದ್ಯಾನದ ಒಂದು ಕುಟೀರಕ್ಕೆ ಬಂದು ನಿಂತು ಹೀಗೆ ನುಡಿಯುತ್ತಾರೆ...

'ನೋಡು ಸಹೋದರಿ ನಾನು ಇಂಡಿಯಾದಿಂದ ಇಲ್ಲಿಗೆ ಬಂದು ನಿಮಗೆ ವೇದಾಂತ ಬೋಧನೆ ಮಾಡಿ, ಸರ್ವಧರ್ಮ ಸಮನ್ವಯದ ದೃಷ್ಟಿಯನ್ನು ನೀಡಿ, ನಿಮ್ಮನ್ನು ಮತಾಂತರಗೊಳಿಸುವ ರೂಕ್ಷ ಬರ್ಬರವಾದ ಕಿರಾತ ನೀತಿಗೆ ಕೈಹಾಕದೇ ಕ್ರೈಸ್ತ, ಯಹೂದ್ಯರಿಗೆ, ಮೆಥಡಿಸ್ಟರಿಗೆ, ಪ್ಯೂರಿಟನ್ನರಿಗೆ, ಕ್ಯಾಥೋಲಿಕ್ಕರಿಗೆ ಅವರವರ ಭಾವದಲ್ಲಿಯೇ ಅವರವರ ಶ್ರದ್ಧೆಯಲ್ಲಿಯೇ ಅವರವರು ಮುಂದುವರಿ ಯುವಂತೆ ಹೇಳಿ ದೀಕ್ಷೆ ಕೊಡುವ ಕೆಲಸದಲ್ಲಿದ್ದೇನೆ. ಸ್ವಲ್ಪ ಹೆಚ್ಚು ಕಡಿಮೆ ಅದೇ ದಿನದಲ್ಲಿ ಅದೇ ಸಮಯದಲ್ಲಿ ನನ್ನ ಮಾತೃಭೂಮಿಯ ಒಂದು ಪರ್ವತಾರಣ್ಯ ಪ್ರದೇಶದ ಮೂಲೆಯಲ್ಲಿ ಕ್ರೈಸ್ತ ಧರ್ಮದ ಪ್ರಚಾರಕರು ಬ್ರಿಟೀಷ್ ಸರ್ಕಾರದ ರಾಜಕೀಯ ಬಲ, ಪ್ರತಿಷ್ಠೆ, ಮೂಲಸೌಕರ್ಯಗಳನ್ನು; ಸೌಲಭ್ಯ ಗಳನ್ನು ಪಡೆದು ವಿದ್ಯಾಭ್ಯಾಸದ ಮತ್ತು ವೈದ್ಯಕೀಯದ ನೆರವೀಯುವ ಬಲೆಯೊಡ್ಡಿ, ಅರಿಯದ ಅಜ್ಞಾನಿಗಳನ್ನು ತಮ್ಮ ಜಾತಿಗೆ ಸೇರಿಸಿಕೊಂಡು ತಮ್ಮ ಸಂಖ್ಯಾಪ್ರಮಾಣವನ್ನು ಹೆಚ್ಚಿಸಿಕೊಳ್ಳುವ ವ್ಯಾಪಾರಿ ಉದ್ಯಮದಲ್ಲಿದ್ದಾರೆ. ಆದರೆ ಆಜ್ಞಾನಿ ಜನರಲ್ಲಿ ಒಂದು ಅಂಧವಾದ ಸ್ವಂತ ನಿಷ್ಠೆ ಇರುವುದರಿಂದ ಅವ ರು ಮಿಷನರಿಗಳ ಮತಾಂತರ ಕಾರ್ಯವನ್ನು ತಮ್ಮದೇ ಆದ ವಿಧಾನದಿಂದ ವಿಫಲಗೊಳಿಸಿದ್ದಾರೆ.'[೨]

ಪೌರಾತ್ಯ ಮತ್ತು ಪಾಶ್ಚಿಮಾತ್ಯ ಮೌಲ್ಯಗಳನ್ನು ಮುಖಾಮುಖಿಯಾಗಿಸುವುದರೊಂದಿಗೆ ವಿವೇಕಾ ನಂದರ ಆಧ್ಯಾತ್ಮಿಕತೆ. ತತ್ವ ವಿಚಾರಗಳ ಬಗೆಗಿನ ಒಲವನ್ನು ಕುವೆಂಪು ಇಲ್ಲಿ ವ್ಯಕ್ತಪಡಿಸಿದ್ದಾರೆ.

ವಾಸ್ತವತೆಯ ದೃಷ್ಟಿಯಿಂದ ಇಂದು ಪೌರಾತ್ಯ ಮತ್ತು ಪಾಶ್ಚಿಮಾತ್ಯ ಎಂಬ ಧೋರಣೆಗಳನ್ನು ತೊಡೆಯ ಬೇಕಾದ 'ಮಾನವಕುಲಂ ತಾನೊಂದೆ ವಲಂ' ಎಂಬ ಪಂಪನ ಆಣತಿಯಂತೆ ಕುವೆಂಪು ವಾಸ್ತವಿಕತೆ ಯ ವಿಶ್ವಮಾನವತಾವಾದಿಯಾಗಿದ್ದಾರೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯ ಕೊನೆಯ ಭಾಗವು ೧೯ನೆಯ ಶತಮಾನದ ಕೊನೆಯ ಹಾಗೂ ೨೦ನೇ ಶತಮಾನದ ಮೊದಲ ಭಾಗದ ಸಾಂಸ್ಕೃತಿಕ ಸಂಘರ್ಷದ ಮುಖಾಮುಖಿ ಯನ್ನು ನಮ್ಮ ಮುಂದೆ ತೆರೆದಿಡುವ ಮಹತ್ವದ ಚಾರಿತ್ರಿಕ ದಾಖಲೆಯಾಗಿದೆ.

ಸಾಮಾಜಿಕ ಜೀವನವನ್ನು ಬುಡಮೇಲು ಮಾಡುವ ಕಾರ್ಯ ಎಂದು ಮತಾಂತರವನ್ನು ವಿರೋಧಿಸಿದ ಮುಕುಂದಯ್ಯನಿಗೆ ರೆವರೆಂಡರು, 'ನಮ್ಮ ಮತಾಂತರ ಚಟುವಟಿಕೆಗಳನ್ನು ನೀವು ಸಾಮಾಜಿಕ ಜೀವನವನ್ನು ಬುಡಮೇಲು ಮಾಡುವ ಕಾರ್ಯ ಎಂದು ವರ್ಣಿಸುತ್ತೀರಿ. ಯಾರನ್ನು ಬಲಾ ತ್ಕಾರವಾಗಿ ಕ್ರೈಸ್ತರನ್ನಾಗಿ ಮಾಡುವ ಇಚ್ಛೆ ನಮಗಿಲ್ಲ. ನೀವು ನಮ್ಮ ಜೊತೆಗೆ ಸೇರದಿರಬಹುದು. ಸೇರದಿದ್ದರೆ ಚಿಂತೆಯಿಲ್ಲ. ಆದರೆ ಗೌಡರೆ ನಾನು ಹೇಳುತ್ತಿರುವುದನ್ನು ಗಮನವಿಟ್ಟು ಕೇಳಿ. ನಿಮ್ಮ ಜಾತಿ ಯವರು ಎಲ್ಲಿಯವರೆಗೆ ಬ್ರಾಹ್ಮಣರ ಪಾದ ತೊಳೆದು ಅದನ್ನು ತೀರ್ಥವೆಂದು ಕುಡಿಯುವುದನ್ನೇ ತಮ್ಮ ಧರ್ಮ, ಜೀವನ, ಸರ್ವಸ್ವ ಎಂದು ಭಾವಿಸುವರೋ ಅಲ್ಲಿಯವರೆಗೆ ನಿಮಗೆ ಉಳಿಗಾಲವಿಲ್ಲ. ನಿಮ್ಮ ಮೂಢಾಚಾರಗಳು ಬ್ರಾಹ್ಮಣರ ಜೀವನೋಪಾಯಕ್ಕೆ ಸಂಪಾದನೆಗೆ ಬಂಡವಾಳ ಸ್ವರೂಪವಾಗಿವೆ. ನಿಮ್ಮನ್ನು ಅವರು ನಾಯಿಗಳ ಹಾಗೆ ಕಾಣುತ್ತಾರೆ. ಮುಟ್ಟುವುದಿರಲಿ ಹತ್ತಿರ ಬಂದರೂ ಮೈಲಿಗೆ. ಶೂದ್ರರು ವೇದ ಓದಬಾರದಂತೆ! ಓದುವುದಿರಲಿ ಯಾರಾದರೂ ಓದುವುದನ್ನು ಆಲಿಸಿದರೂ ನರಕದಲ್ಲಿ ಶೂದ್ರನ ಕಿವಿಗೆ ಕಾಯಿಸಿದ ಕಬ್ಬಿಣವನ್ನು ಹೊಯ್ಯುತ್ತಾರಂತೆ. ಆದರೆ ಕ್ರೈಸ್ತ ಧರ್ಮದಲ್ಲಿ ಜಾತಿ ಬೇಧ ವಿಲ್ಲ.'[3] ಎಂದು ಸಮರ್ಥನೆ ನೀಡುತ್ತಾರೆ

ಈ ಹಿನ್ನೆಲೆಯಲ್ಲಿ ಕುವೆಂಪುರವರ ಕಾನೂರು ಹೆಗ್ಗಡಿತಿ ಮತ್ತು ಮಲೆಗಳಲ್ಲಿ ಮದುಮಗಳು ಕಾದಂಬರಿಗಳು ವಾಸ್ತವಿಕತೆಯನ್ನು ಪ್ರತಿನಿಧಿಸುವ ಭಿನ್ನ ನೆಲೆಯಲ್ಲಿ ರಚನೆಯಾದವು. ಇವುಗಳ ರಚನೆ ಕಾಲ ಸ್ವಾತಂತ್ರ ನಂತರದ ಕಾಲವಾದರೂ ಕಥೆಯ ಸನ್ನಿವೇಶ ಸಂಪೂರ್ಣವಾಗಿ ನಮ್ಮ ಪ್ರಾದೇಶಿಕತೆಯ ಮೇಲೆ ವಸಾಹತು ಆಕ್ರಮಿಸುತ್ತಿರುವ ಸಂದರ್ಭದ್ದು. ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಜಾರಿಗೆ ಬಂದ ಮತಾಂತರದ ಕುರುಹುಗಳು ಸ್ಕೂಲು, ಆಸ್ಪತ್ರೆ, ಬೈಸಿಕಲ್ಲು, ಲಾಟೀನು ಇವು ಮಲೆನಾಡಿನ ಸಾಂಸ್ಕೃತಿಕ ಬದುಕನ್ನು ಪ್ರವೇಶಿಸಿ ಹೊಸ ವಿಸ್ಮಯಗಳನ್ನು ಹುಟ್ಟುಹಾಕುತ್ತವೆ.

ಮತಾಂತರ ಪ್ರಕ್ರಿಯೆ ಅನಾದಿಕಾಲದಿಂದ ಭಾರತದ ಸಾಂಸ್ಕೃತಿಕ ಚರಿತ್ರೆಯಲ್ಲಿ ಕಂಡುಬರುತ್ತಿದೆ. ಭಿನ್ನ ಧರ್ಮಗಳು ಮುಖಾಮುಖಿಯಾಗುವ ಸಂದರ್ಭದಲ್ಲಿ ಧರ್ಮ ಎಂಬುದು ರಾಜಕೀಯವನ್ನು ಒಂದು ಯಂತ್ರವನ್ನಾಗಿ ಬಳಸಿಕೊಳ್ಳುವುದನ್ನು ಕಾಣಬಹುದು. ಕಿಲಿಸ್ತರ ಪಾದ್ರಿ ಜೀವರತ್ನಯ್ಯ ದೇವಯ್ಯ ನಂತಹ ಕಟ್ಟುಪಾಡುಗಳ ಸಮಾಜ ಜೀವಿಯನ್ನು ಮತಾಂತರಕ್ಕೆ ಅಣಿಮಾಡುತ್ತಾನೆ. ಎಂದರೆ ಈಗಾಗಲೇ ಪ್ರತಿಷ್ಠಾಪಿತ ಧರ್ಮವನ್ನು ಹೊಡೆಯುವ, ಕದಡುವ ಹುನ್ನಾರ ಮಾಡಿದ್ದಾರೆ ಎಂದರ್ಥವಲ್ಲವೇ? ಇಂತಹ ಹುನ್ನಾರಗಳು ಮೇಲು ನೋಟಕ್ಕೆ ಹಗುರವಾಗಿ ಕಂಡರೂ ಆಂತರಿಕವಾಗಿ ಆಕ್ರಮಣಕಾರಿ ಯಾಗಿವೆ. ಭಾರತದಂತಹ ಸಂಪ್ರದಾಯಬದ್ಧ ರಾಷ್ಟ್ರಗಳನ್ನು ಬ್ರಿಟೀಷರು ವಸಾಹತುಗಳನ್ನಾಗಿ ಮಾಡಿ ಕೊಂಡ ಸಂದರ್ಭ ಅವರು ದೊಡ್ಡ ಪ್ರಮಾಣದಲ್ಲಿಯೇ ತಮ್ಮ ಉದ್ದೇಶವನ್ನು ಸಾಧಿಸಿದಂತಾಯಿತು.

ನವೋದಯದ ಲೇಖಕರಾದ ಮಾಸ್ತಿಯವರು ತಮ್ಮ ಕೃತಿಗಳಲ್ಲಿ ಹಿಂದು, ಕ್ರೈಸ್ತ, ಜೈನ, ಲಿಂಗಾಯಿತ, ಹಿಂದೂ ಮುಸ್ಲಿಂ ಧರ್ಮಗಳ ನಡುವಿನ ಸಂಘರ್ಷಗಳನ್ನು ಪ್ರಕಟಿಸಿದ್ದಾರೆ. ಶಿವರಾಮ ಕಾರಂತರ 'ಚೋಮನ ದುಡಿ' ಕಾದಂಬರಿ ಮತಾಂತರದ ವಿಚಾರವನ್ನು ಭಿನ್ನ ನೆಲೆಯಲ್ಲಿ ಮಂಡಿಸು ತ್ತದೆ. ಸ್ವಾತಂತ್ರ ನಂತರದ ನಮ್ಮದೇ ಸಂವಿಧಾನ, ನಮ್ಮದೇ ಆಳ್ವಿಕೆ, ನಮ್ಮದೇ ಕಾನೂನುಗಳಿದ್ದರೂ ವಿಧಿ-ನಿಯಮಗಳಲ್ಲಿ ಧಾರ್ಮಿಕ ಸಹಿಷ್ಣುತೆಯನ್ನು ಪ್ರತಿಪಾದಿಸಿದರು. ಒಂದು ವರ್ಗದವರು ಇನ್ನೊಂದು ವರ್ಗದವರ ಮೇಲೆ ತಮ್ಮ ಧರ್ಮವನ್ನು ಬಲವಂತವಾಗಿ ಏರುವ ಪರಿಸ್ಥಿತಿಯನ್ನು ಕುವೆಂಪು ತಮ್ಮ ಕಾದಂಬರಿಗಳ ಮೂಲಕ ಬಿಡಿಸಿ ತೋರಿಸಿದ್ದಾರೆ.

ಸ್ವಾತಂತ್ರ್ಯ ನಂತರದ ಕನ್ನಡ ಸಾಹಿತ್ಯ ಮತಾಂತರ ಪ್ರಕ್ರಿಯೆಯನ್ನು ಬೇರೊಂದು ನೆಲೆಯಲ್ಲಿಯೇ ಚಿಂತಿಸುತ್ತದೆ. ಇಸ್ಲಾಂ, ಶೂದ್ರ, ದಲಿತ ಹಾಗೂ ಸ್ತ್ರೀ ಸಂವೇದನೆಯ ಕೃತಿಗಳು ನಮ್ಮದೇ ಧರ್ಮದೊಳಗೆ ಆಂತರಿಕ ಅಮಾನವೀಯ ಮೌಲ್ಯಗಳನ್ನು ಪ್ರಶ್ನಿಸುತ್ತವೆ. ಹಳೆಪೈಕದವರಿಗೆ ಭೂಮಿಯ ಒಡೆತನವನ್ನು ನೀಡುವ, ಅವರು ಮದುವೆ ಮುಂತಾದ ಶುಭ ಸಂದರ್ಭಗಳಲ್ಲಿ ಯಜಮಾನರನ್ನು ಅನುಕರಿಸುವ ಕ್ರಿಯೆಗಳನ್ನು ಅಲ್ಲಿನ ಸಾಮಾಜಿಕ ಸಂಪ್ರದಾಯ ನಿಷೇಧಿಸುತ್ತದೆ. ಇಂಹತ ಕಲುಷಿತ ಕ್ರೌರ್ಯಗಳು ಬಲ ಗೊಂಡ ಮಲೆನಾಡಿನ ಜನರ ಬದುಕಲ್ಲಿ ಶಂಕರಾಚಾರ್ಯ, ವಿವೇಕಾನಂದರು ಪ್ರತಿಪಾದಿಸಿದ ಹಿಂದೂ ಧರ್ಮ ಅದೆಲ್ಲಿ ನಡೆಯುತ್ತದೆ ಎಂಬ ಜಿಜ್ಞಾಸೆ ನಮ್ಮನ್ನು ಕಾಡುತ್ತದೆ.

ವೈದಿಕ ಸಮಾಜದ ಮೇಲ್ವರ್ಗದವರು ತಮ್ಮ ಅವಿವೇಕತನದಿಂದ ಅನಾಚಾರದಿಂದ ಶೂದ್ರ ವರ್ಗಗಳನ್ನು ಸೃಷ್ಟಿಸಿದರು. ಶೂದ್ರರು, ಶೂದ್ರಾತಿಶೂದ್ರರು ಮತ್ತು ಪುರೋಹಿತರ ನಡುವಿನ ಪಕ್ಷಪಾತದ ಧೋರಣೆಗಳು ಕುವೆಂಪುರವರ ಎರಡು ಕಾದಂಬರಿಗಳಲ್ಲಿ ಪ್ರತಿಬಿಂಬಿತವಾಗಿವೆ. ಕಾನೂರು ಹೆಗ್ಗಡಿತಿಯ ವೆಂಕಪ್ಪಜೋಯಿಸರು ಮಾಡುವ ಅನಾಚಾರಗಳನ್ನು 'ಮದುಮಗಳ' ಕಲ್ಲೂರು ಮಂಜಭಟ್ಟರು

ತೋರುವ ತಾರತಮ್ಯ ನೀತಿಯನ್ನು ಕುವೆಂಪು ಮಾತ್ರವಲ್ಲದೆ ಅವರು ಚಿತ್ರಿಸಿರುವ ಶಿಶು ಪಾತ್ರಗಳು ವಿಡಂಬಿಸಿವೆ. ಶೂದ್ರರಿಗೆ ಮತ್ತು ಸಮಾಜದ ತಳ ವರ್ಗದವರಿಗೆ ಶಿಕ್ಷಣ, ಶಾಸ್ತ್ರ, ಆಚಾರ, ಮಡಿವಂತಿಕೆ ಇವುಗಳ ಬಗ್ಗೆ ಖಂಡನೆಯಿದೆ. ಅಂದರೆ ಶೂದ್ರನೊಬ್ಬನು ಶಿಕ್ಷಣ ಪಡೆಯುವುದು ಮಹಾಪಾಪವೆಂಬ ಧೋರಣೆಯನ್ನು ಶೂದ್ರರಲ್ಲಿ ಬಿತ್ತಿ ಅವರನ್ನು ಜ್ಞಾನದಿಂದ ವಂಚಿತರನ್ನಾಗಿ ಮಾಡಲು ಶಾಸ್ತ್ರ ಸಂಪ್ರದಾಯಗಳು ಮುಂದಿಟ್ಟ ಪುರೋಹಿತಶಾಹಿ ವ್ಯವಸ್ಥೆಯನ್ನು ಕುವೆಂಪು ತೀವ್ರವಾಗಿ ಪ್ರಶ್ನಿಸಿದ್ದಾರೆ. ಇದರಿಂದಾಗಿಯೇ ಕೆಲವು ವಿಮರ್ಶಕರು ಕುವೆಂಪು ಬ್ರಾಹ್ಮಣ ವಿರೋಧಿ ಎಂದಿದ್ದಾರೆ.

"ಹಿಂದು ಧರ್ಮ ಕಾವಲಿಲ್ಲದ ಕೋಟೆಯಂತೆಯೂ ರಕ್ಷಕರಿಲ್ಲದ ದುರ್ಗದಂತೆಯೂ" ಆಗಿದೆ. ಆದರು ಭಿನ್ನ ಧರ್ಮವೊಂದು ಗಾಢವಾಗಿ ಕೆಳವರ್ಗಗಳ ಮೇಲೆ ಪರಿಣಾಮ ಬೀರಲಾರದ ವಾಸ್ತವಾಂಶವು ಇಲ್ಲಿದೆ. ವೇದಾಂತ ದರ್ಶನದ ಮಾನವೀಯ ಮೌಲ್ಯಗಳಾಗಲಿ ಜ್ಞಾನವಾಗಲಿ ಇಲ್ಲದ ವರ್ಗವೊಂದು ಸನಾತನ ಅಂಧಾಚಾರಗಳನ್ನೇ ತತ್ವಗಳೆಂದು ನಂಬಿ ಸ್ವಂತ ಆಲೋಚನಾ ಶಕ್ತಿಯಿಲ್ಲದ ಜಡ ಬುದ್ಧಿಯ ಹಳೆಯ ತಲೆಮಾರನ್ನು ಮತಾಂತರಗೊಳಿಸುವುದು ಕ್ರೈಸ್ತ ಪಾದ್ರಿ ಜೀವರತ್ನಯ್ಯನಿಗೆ ಸುಲಭವಲ್ಲ. ಆದ್ದರಿಂದ ಜಾಗೃತಮತಿಗಳಾದ ಸನಾತನ ಧರ್ಮದ ಮೂಲ ತತ್ವಗಳನ್ನು ಅರಿಯದ ಸಿಂಧುವಳ್ಳಿ ಚಿನ್ನಪ್ಪ ಹಾಗೂ ದೇವಯ್ಯನಂತಹ ಯುವ ಪೀಳಿಗೆಯನ್ನು ತನ್ನ ಮತಾಂತರ ಖೆಡ್ಡಾಕ್ಕೆ ಬೀಳಿಸಲು ಪಾದ್ರಿ ಜೀವರತ್ನಯ್ಯ ಪ್ರಯತ್ನಿಸುತ್ತಾನೆ.

ಹೊಸ ಸಂಸ್ಕೃತಿ ಮತ್ತು ನಾಗರಿಕತೆಯೊಂದರ ಸಂಪರ್ಕವನ್ನು ಕುರಿತು ಕುವೆಂಪು ಕಾದಂಬರಿಗಳಲ್ಲಿ ಹೊಸ ಆಯಾಮವನ್ನೇ ಸೃಷ್ಟಿಸಿದ್ದಾರೆ. ಹೊಸ ಸಂಸ್ಕೃತಿಯ ಸಂಪರ್ಕಕ್ಕೆ ಒಳಗಾದ ಸಿಂಧುವಳ್ಳಿ ಚಿನ್ನಪ್ಪ ನಂತಹವರ ವೇಷಭೂಷಣಗಳು ಸ್ಥಳೀಯ ಮತ್ತು ಗ್ರಾಮೀಣ ಪರಿಸರದಲ್ಲಿ ಆಕರ್ಷಕವಾಗಿಯೂ ಆಶ್ಚರ್ಯಕರವಾಗಿಯೂ ಕಂಡುಬರುತ್ತದೆ. ಸಿಂಧುವಳ್ಳಿ ಚಿನ್ನಪ್ಪನನ್ನು ಪಳಗಿಸಿಕೊಂಡು ಅವನ ಮೂಲಕ ಮಲೆನಾಡಿನ ಪ್ರತಿಷ್ಠಿತ ಗೌಡರ ಕುಟುಂಬದೊಂದಿಗೆ ಸ್ನೇಹ ಸಂಪಾದಿಸುವ ಕ್ರೈಸ್ತ ಪಾದ್ರಿಯ ತಂತ್ರ ಇಂದಿಗೂ ಸದರ್ಶನವಾಗಿದೆ. ನಮ್ಮ ದೇಶದ ಮೇಲೆ ಎಲ್ಲ ಕಡೆಯಿಂದಲೂ ದಾಳಿ ನಡೆದಿದೆ. ಆಳ್ವಿಕೆ ಮಾಡಿದ ಆಳರಸರೆಲ್ಲರೂ ಮೊದಲು ಬಂದದ್ದು ಹೀಗೆಯೇ.

ಭಿನ್ನಧರ್ಮೀಯರಿಗೆ ಊಟ ನೀಡುವ ಒಂದು ಸಾಮಾನ್ಯ ವಿಚಾರವನ್ನು ಕುರಿತಾಗಿ ಏರ್ಪಡುವ ಗೊಂದಲಗಳನ್ನು ಕುವೆಂಪು ತಮ್ಮ ಕಾದಂಬರಿಗಳಲ್ಲಿ ಮನೋಜ್ಞವಾಗಿ ಚಿತ್ರಿಸಿದ್ದಾರೆ. "ಆ ದಿನ ರಾತ್ರಿ ಊಟದ ಸಮಯ ಬಂದಾಗಲಂತೂ ಬೆಟ್ಟಳ್ಳಿಯ ಮನೆಯಲ್ಲಿ ಒಂದು ಕ್ರಾಂತಿಯ ವಾತಾವರಣವೇ ಏರ್ಪಟ್ಟಿತ್ತು. ಮಂಡಿಗೆಯ ಮರೆಯಲ್ಲಿ, ಬಾಗಿಲ ಸಂದಿಯಲ್ಲಿ, ಅಡಿಗೆ ಮನೆಯಲ್ಲಿ, ಕೋಣೆಗಳಲ್ಲಿ,

ಎಲ್ಲೆಲ್ಲಿಯೂ ಗುಸುಗುಸು. ಏನೋ ಗಡಿಬಿಡಿ. ರಾಜಕೀಯ ಮಹಾಕ್ರಾಂತಿಯ ದಿನದಂದು ಆ ರಾಜ್ಯದ ರಾಜಧಾನಿಯಲ್ಲಿ ನಡೆಯುವ ಉದ್ವಿಗ್ನ ಪರಿಸ್ಥಿತಿಯಂತೆ."[೪]

ತನ್ನ ಧರ್ಮದ ಅತ್ಯಂತ ಕೆಳಸ್ತರದವರು ಹಾಗೂ ಶೂದ್ರರು ಹೀಗೆಯೇ ವಿಚಾರ ಮಾಡುತ್ತಾರೆ ಎಂಬುದು ಗಮನಾರ್ಹ ವಿಷಯ. ಇಲ್ಲಿ ಅನ್ಯಧರ್ಮೀಯರನ್ನು ತನ್ನ ಧರ್ಮದ ಶೂದ್ರಾದಿಶೂದ್ರ ಅಸ್ಪೃಶ್ಯನಿಗಿಂತಲು ಕಡೆಯಾಗಿ ಕಾಣಲಾಗುತ್ತಿದೆ. ಊಟ ಹಾಕುವಾಗ ಎಲ್ಲಿ ಕೂರಿಸಬೇಕು ಹಾಗೂ ಎಲೆ ಹಾಕುವಾಗ ಕೀತು ಹಾಕಬೇಕೊ ಕುಡಿ ಹಾಕಬೇಕೋ ಕಂಡು ಹಾಕಬೇಕೋ ಎಂಬ ವಿಚಾರ ಗೊಂದಲ ವನ್ನು ಮೂಡಿಸುತ್ತದೆ. ಅನ್ನವನ್ನು ಯಾರು ಬಡಿಸಬೇಕೆಂಬ ವಿಚಾರದಲ್ಲಿಯೂ ಕೂಡ ಇಂತಹ ವಿಚಾರದಲ್ಲಿ ಜಾತಿ ಕೆಡುತ್ತದೆ ಅದು ಮಹಾಪರಾಧ ಎಂಬಂತೆ ಮಲೆನಾಡಿನ ಸಂಪ್ರದಾಯಬದ್ಧ ಕುಟುಂಬಗಳು ರೂಢಿಗತವಾದ ಆಚಾರ ವಿಚಾರಗಳನ್ನು ಪಾಲಿಸುತ್ತವೆ. ಸಂಪ್ರದಾಯಗಳು ಕೇವಲ ಕಿಲಿಸ್ತರಿಗೆ ಮಾತ್ರವಲ್ಲದೆ ಗೌಡ, ನಾಯಕ ಮನೆಯಲ್ಲಿ ಜೀತದಾಳುಗಳಾಗಿ ದುಡಿಯುವ ಬೇಲರು, ಬಿಲ್ಲರು, ಹಲಸೋರು, ಹಳೇಪೈಕದವರು ಹೀಗೆ ನಾನಾ ರೀತಿಯ ಶೂದ್ರಾತಿಶೂದ್ರ ವರ್ಗಕ್ಕೂ ಅನ್ವ ಯಿಸುತ್ತವೆ. ಅಸ್ಪೃಶ್ಯರು ಒಕ್ಕಲಿಗರ ಮನೆಯ ಜಗುಲಿಯನ್ನು ಪ್ರವೇಶಿಸುವಂತಿಲ್ಲ. ಅವರ ಮನೆಯ ಹಿತ್ತಲಿನಲ್ಲಿ ಕುಳಿತು ಅವರು ಹಾಕುವ ಅನ್ನವನ್ನು ಕೈನೀಡಿ ತೆಗೆದುಕೊಂಡು ತಿನ್ನಬೇಕು. ತಿನ್ನುವ ಕುಡಿ ಯುವ ವಿಧಾನಗಳನ್ನು ಬಹಳ ಕಟ್ಟುಪಾಡುಗಳಿಂದ ಅವರು ಆಚರಿಸುತ್ತಾರೆ.

ಶೂದ್ರರು ಅತಿಶೂದ್ರರನ್ನು ಈ ರೀತಿಯಾಗಿ ಸತ್ಕಾರ ಮಾಡಿದರೆ ಇದಕ್ಕೇ ಸಮಾನರೂಪವಾಗಿ ಎಂಬಂತೆ ಬ್ರಾಹ್ಮಣ ವರ್ಗದವರು ಗೌಡ, ಒಕ್ಕಲಿಗ, ನಾಯಕರನ್ನು ತೀರಾ ಅಸ್ಪೃಶ್ಯರಂತೆ ಉಪಚರಿಸುವ ವಾಡಿಕೆಯನ್ನು ಕುವೆಂಪು ತಮ್ಮ ಕಾದಂಬರಿಗಳ ಮೂಲಕ ತೋರಿಸಿಕೊಟ್ಟಿದ್ದಾರೆ. ಕಲ್ಲೂರು ದೇವ ಸ್ಥಾನದಲ್ಲಿ ಮಂಜಭಟ್ಟರು ಜನರಿಗೆ ನೀಡಿದ ನೈವೇದ್ಯದ ಪ್ರಸಂಗದಲ್ಲಿ ಬಾಲಕರು ಕೂಡ ಪ್ರತಿ ಭಟಿಸುವಂತಹ ಮಾತನಾಡುತ್ತಾರೆ ಎಂದ ಮೇಲೆ ನಮ್ಮಲ್ಲಿ ಜಾತಿ ತಾರತಮ್ಯ, ಮಡಿ ಮೈಲಿಗೆ, ಶ್ರೇಷ್ಠ-ಕನಿಷ್ಠ ಮುಂತಾದ ತರ-ತಮಗಳ ಜಡ್ಡು ಎಷ್ಟರ ಮಟ್ಟಿಗೆ ಇದೆ ಎಂದು ನಾವು ತಿಳಿಯಬಹುದು. ಪ್ರಜಾಪ್ರಭುತ್ವ ವ್ಯವಸ್ಥೆಯ ಸಂವಿಧಾನದಡಿಯಲ್ಲಿ ನಾವು ಜಾತ್ಯತೀತತೆ, ಸಮಾನತೆಯೆಂದು ಬೊಬ್ಬೆ ಹೊಡೆಯುತ್ತಿದ್ದರೂ ನಮ್ಮ ಸುತ್ತಮುತ್ತಲ ಜನಜೀವನದಲ್ಲಿ ಇಂತಹ ಪವಿತ್ರ-ಅಪವಿತ್ರ ಭಾವನೆಗಳು ಇಂದೂ ಕೂಡ ಜೀವಂತವಾಗಿದೆ. ಅಂಬೇಡ್ಕರ್, ಲೋಹಿಯಾ, ಜಯಪ್ರಕಾಶ್, ಗಾಂಧೀಜಿ ಮುಂತಾದ ಮಹಾನ್ ನಾಯಕರೇ ತಂದ ಸುಧಾರಣೆ ಸವೆದು ಹೋಗಿ ಬುದ್ಧ ಬಸವರನ್ನು ಹಿಂದಿಕ್ಕಿ, ಈ ರೀತಿಯ ಅಮಾನವೀಯ ಕಲ್ಪನೆ ಮೆರೆಯುತ್ತಿದೆ ಎಂದರೆ ಅದೊಂದು ವಾಸ್ತವತೆಯ ಜ್ವಲಂತ ಸಮಸ್ಯೆಯೆಂದೇ ಪರಿಗಣಿಸಬೇಕು.

**ಕೊನೆ ಟಿಪ್ಪಣಿಗಳು**

೧) ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ೧೯೯೭ ಪುಟ ೨೭೮

೨) ಅದೇ, ಪುಟ ೬೮೮

೩) ಅದೇ, ಪುಟ ೨೦೭

೪) ಅದೇ, ಪುಟ ೧೯೯

# ಸಾರರೂಪ

ಕನ್ನಡ ಸಾಹಿತ್ಯ ಪರಂಪರೆಗೆ ಕುವೆಂಪು ತಮ್ಮ ಕಾದಂಬರಿಗಳ ಮೂಲಕ ಸಲ್ಲಿಸಿರುವ ಅರ್ಥ ಪರಂಪರೆಯನ್ನು ಅನೇಕ ವಿದ್ವಾಂಸರು, ವಿಮರ್ಶಕರು, ಸಂಶೋಧಕರು ವಿಶ್ಲೇಷಿಸಿದ್ದಾರೆ. ಕುವೆಂಪು ಅವರ ಕಾದಂಬರಿಗಳಾದ 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕನ್ನಡ ಸಾಹಿತ್ಯ ಇತಿಹಾಸದಲ್ಲಿ ಅನನ್ಯ ಕೃತಿಗಳ ಸಾಲಿಗೆ ಸೇರುತ್ತವೆ. ಈ ಕಥನಗಳಲ್ಲಿ ಕಾಣಿಸಿಕೊಳ್ಳುವ ವೈವಿಧ್ಯತೆ ಓದುಗರನ್ನು ಮತ್ತೆ ಮತ್ತೆ ಓದಿಸಲು ಉದ್ದೀಪನಗೊಳಿಸುತ್ತದೆ. ಕುವೆಂಪುರವರ ಶ್ರೀರಾಮಾಯಣ ದರ್ಶನಂ ಮಹಾಕಾವ್ಯದಲ್ಲಾಗಲೀ, ಅವರ ಕತೆಗಳಲ್ಲಾಗಲೀ ಕಾಣಸಿಗದ ನಿರೂಪಣೆ ಇಲ್ಲಿದೆ. ಶೂದ್ರ ತಪಸ್ವಿ, ಜಲಗಾರ ಮುಂತಾದ ನಾಟಕಗಳಲ್ಲಿ ಪ್ರತಿಪಾದಿಸಿರುವ ಅಂಶಗಳಲ್ಲಿ ಕೆಲವು ಇಲ್ಲಿವೆಯಾದರೂ ಸಾಲದ ಮಗು, ಧನ್ವಂತರಿ ಚಿಕಿತ್ಸೆ, ಕಿಂದರಿ ಜೋಗಿ ಕಥನಗಳ ಪಡಿಯಚ್ಚಾಗಿಲ್ಲ. ಒಂದಕ್ಕಿಂತ ಮತ್ತೊಂದನ್ನು ಭಿನ್ನವಾಗಿ ರಚಿಸುವ ಸೃಜನಶೀಲತೆ ಕುವೆಂಪುರವರಿಗೆ ಸಿದ್ಧಿಸಿದೆ. ನಮ್ಮ ನಾಡಿನ ಒಂದು ಭಾಗದ ಜನರ ಸಂಸ್ಕೃತಿಯ ಪ್ರತಿಬಿಂಬ ಈ ಕಾದಂಬರಿಗಳಲ್ಲಿದೆ. ಮಲೆನಾಡ ಪರಿಸರ ಸಂಸ್ಕೃತಿ ಅಲ್ಲಿ ನಡೆಯುವ ಕಥಾಸಾರ ಕೇವಲ ಸಹ್ಯಾದ್ರಿ ತಪ್ಪಲಿಗೆ ಮಾತ್ರ ಸೀಮಿತವಾಗಿರದೇ ಧರ್ಮಸ್ಥಳ, ತಿರುಪತಿ, ಆಗುಂಬೆ, ಮೈಸೂರು, ಚಿಕಾಗೋ ಹೀಗೆ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ನೆಲೆಗಳಲ್ಲಿ ಕಥಾವಸ್ತು ವನ್ನು ಚಿತ್ರಿಸಲಾಗಿದೆ. ಪಾತ್ರ ಸೃಷ್ಟಿಯೂ ಕೂಡ ಹೂವಯ್ಯ ಮುಕುಂದಯ್ಯರಿಂದ ಹಿಡಿದು ಐತ, ಗುತ್ತಿ, ಪೀಂಚಲು, ವಾಸು, ಗಂಗ ಹುಡುಗರಾದಿಯಾಗಿ, ಪ್ರಾದೇಶಿಕತೆಯನ್ನು ಮೀರಿ ರಾಮಕೃಷ್ಣ ಪರಮಹಂಸ, ವಿವೇಕಾನಂದ, ಭಗವಾನ್‌ಬುದ್ಧ, ಏಸುಕ್ರಿಸ್ತ ಮುಂತಾದ ಆದರ್ಶಯುತವಾದ ಪಾತ್ರಗಳನ್ನು ಒಳ ಗೊಂಡ ಕಾದಂಬರಿಗಳಾಗಿವೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯ ಆರಂಭ ಗುತ್ತಿ ಎಂಬ ದಲಿತ ವ್ಯಕ್ತಿಯಿಂದಾದರೆ ಕಾನೂರು ಹೆಗ್ಗಡಿತಿಯ ಕಥನ ವಿದ್ಯಾವಂತ ತರುಣರಿಬ್ಬರು ಮೈಸೂರಿನಿಂದ ಶಿಕ್ಷಣ ಮುಗಿಸಿ ಮಲೆ ನಾಡಿಗೆ ಪ್ರವೇಶ ಮಾಡುವುದರಿಂದ ಆಗುತ್ತದೆ. ಮದುಮಗಳು ಕಾದಂಬರಿ ನಿಬಿಡವಾಗಿ ಪೊದೆಯಂತೆ ಉಬ್ಬಿದಂತೆ ಏರಿದಂತೆ ಕಂಡುಬರುತ್ತದೆ. ಆ ಜನರಿಗೆ ಕಾಫಿಹೋಟ್ಲು, ಸ್ಕೂಲು, ಬೈಸಿಕಲ್ಲು ಮುಂತಾ ದವು ಅತ್ಯಂತ ನವನವೀನ ವೈಭವದಂತೆ ಕಾಣ ತೊಡಗುತ್ತವೆ. ಅಪ್ಪಟ ಗ್ರಾಮೀಣ ಹಳ್ಳಿಗಾಡಿನ ಸೊಗಡಿನ ಸಂಪೂರ್ಣ ಚಿತ್ರಣವನ್ನು ಕುವೆಂಪು ಸೆರೆಹಿಡಿದು ಮದುಮಗಳು ಕಾದಂಬರಿಯಲ್ಲಿಟ್ಟಿದ್ದಾರೆ. ಕತ್ತಲು ಗಿರಿ, ಹುಲಿಕಲ್ಲು ನೆತ್ತಿ ಮುಂತಾದ ರಮ್ಯತಾಣಗಳನ್ನು ಅವುಗಳ ಸ್ಥಳೋದ್ಧಾಮ ಧೀಮಂತಿಕೆಯ ಜೊತೆ ಪರಿಚಯಿಸಿ ಕೊಡುತ್ತಾರೆ. ಮದುಮಗಳು ಕಾದಂಬರಿಯಲ್ಲಿ ಸಮಾಜದ ವಿಭಿನ್ನ ಜನರ ಸ್ಥಿತಿಗತಿಗಳು, ಆ ಜನರ ಒಡನಾಟಗಳು ಗಟ್ಟಿಯಾಗಿ ಮೂಡಿಬಂದಿವೆ. ಮತಾಂತರ ಮತ್ತು ಧರ್ಮ

ಪ್ರಚಾರಕ್ಕಾಗಿ ಶಿಕ್ಷಣ, ಔಷಧಿ ಮುಂತಾದ ಅನುಕೂಲಗಳನ್ನು ಕಲ್ಪಿಸುವ ಉಪಾಯವನ್ನು ಮುಂದಿಟ್ಟುಕೊಂಡ ಕಿಲಿಸ್ತರು, ನಮ್ಮ ಸಮಾಜವನ್ನು ಸುಲಿಗೆ ಮಾಡಿ ಅನಾಚಾರಗಳ ಕೇಂದ್ರ ಬಿಂದು ಗಳು ಎನಿಸಿಕೊಳ್ಳುವ ಇಸ್ಲಾಂ ಸಮುದಾಯದ ಒಂದಿಷ್ಟು ಜನರು, ಸಮಾಜದ ಜನರ ಅಂಧತೆ ಮೌಢ್ಯತೆ ಗಳನ್ನು ಬಂಡವಾಳವಾಗಿಸಿಕೊಂಡು ಅವರನ್ನು ನೀಚವಾಗಿ ತುಚ್ಚವಾಗಿ ನಡೆಸಿಕೊಳ್ಳುವ ಪುರೋಹಿತ ಶಾಹಿ ವರ್ಗ, ಬ್ರಾಹ್ಮಣ್ಯಕ್ಕೆ ಹತ್ತಿರದವರಂತೆ ಕಾಣಬರುವ ಒಕ್ಕಲುತನದ ಗೌಡ ನಾಯಕ ಕುಟುಂಬಗಳು, ಹಲವು ಜನ ಜೀತದಾಳುಗಳನ್ನು ಇಟ್ಟುಕೊಂಡು ದುಡಿಸಿಕೊಳ್ಳುವ ದೆಯ್ಯ ದೇವರು ಮುಂತಾದವುಗಳಲ್ಲಿ ಹೆಚ್ಚಾಗಿ ನಂಬಿಕೆ ಇರುವ ಈ ಒಕ್ಕಲಿಗರ ಗುಣ ಸ್ವಭಾವ, ಸಾಕಾರ ವಿಕಾರಗಳು, ಸಮಾಜದ ತಳವರ್ಗ ದಲ್ಲಿರುವ ಗಂಜಿಗಾಗಿ ಪ್ರಾಣಿಗಳಂತೆ ದಯಾನೀಯ ಸ್ಥಿತಿಯಲ್ಲಿ ಬದುಕುವ ಸಮಾಜದ ಶೂದ್ರಾತಿ ಶೂದ್ರರು, ಅವರ ಒಡೆಯರ ಪ್ರೀತಿಯ ಪ್ರಾಣಿ ಸಂಕುಲಗಳು ಇತ್ಯಾದಿಗಳೆಲ್ಲವುಗಳ ಜೀವಂತ ಪರಂಪರೆ ಈ ಕಥನಗಳಲ್ಲಿದೆ.

ಕಾನೂರು ಹೆಗ್ಗಡಿತಿಯ ಕಥಾ ಹಂದರ ಮದುಮಗಳಿಗಿಂತ ಸಂಪನ್ನವೂ ಸಂಸ್ಕಾರಪೂರ್ಣವೂ ನಾಗರೀಕತೆಯಿಂದ ಕೂಡಿದುದಾಗಿದೆ. ನಾಯಕ ಹೂವಯ್ಯನ ಪಾತ್ರದಲ್ಲಿ ಬುದ್ಧನ ತ್ಯಾಗವಿದೆ. ವಿವೇಕಾ ನಂದರ ತೇಜಸ್ಸಿದೆ. ರಾಮಕೃಷ್ಣರ ವಿವೇಕವಿದೆ. ಅಂತೆಯೇ ತನ್ನ ಸುತ್ತ ಮುತ್ತಲಿನ ಪಾತ್ರಗಳಿಗೆ ಆತ ದೀಕ್ಷೆ ನೀಡುವ ಸದ್ಗುರುವಾಗುತ್ತಾನೆ. ಕಾನೂರು ಹೆಗ್ಗಡಿತಿ ಕಥೆಯಲ್ಲಿ ಚಂದ್ರಯ್ಯಗೌಡರು ಏನೆಲ್ಲಾ ಮಾಡಿದರೂ ಯುವ ಹೆಂಡತಿಯನ್ನು ಕಟ್ಟಿಕೊಂಡರೂ ಅವಳು ಹೆಗ್ಗಡಿತಿ ಸ್ಥಾನಕ್ಕೆ ನ್ಯಾಯ ಒದಗಿಸಲಾರದೆ ದುರಂತವನ್ನು ತಂದುಕೊಳ್ಳುತ್ತಾಳೆ. ಹೂವಯ್ಯನು ತಾನು ಹೆಗ್ಗಡೆಯಾಗಿ ಸೀತೆ ಹೆಗ್ಗಡಿತಿ ಯಾಗುವ ಎಲ್ಲ ಅವಕಾಶಗಳಿದ್ದರೂ ಅವನು ತ್ಯಾಗಮೂರ್ತಿಯಾಗಿ ಕಳಂಕರಹಿತವಾದ ಸಹ್ಯಾದ್ರಿಯ ಸೂರ್ಯನಾಗುತ್ತಾನೆ.

ಕಾನೂರು ಚಂದ್ರಯ್ಯಗೌಡರ ಮೊದಲ ಮಗ ರಾಮಯ್ಯ ಅಣ್ಣನಿಗೆ ಮಾಡಿದ ಮೋಸಕ್ಕೆ ತಾನೇ ಬಲಿಯಾಗಿ ತನ್ನ ಅಧ್ಯಾಯವನ್ನು ಕೊನೆಗಾಣಿಸುತ್ತಾನೆ. ಚಂದ್ರಯ್ಯ ಗೌಡರ ದರ್ಪ, ದುರಹಂಕಾರ, ದೌರ್ಜನ್ಯಗಳೆಲ್ಲವೂ ಅಳಿದ ಮೇಲೆ ಇಡೀ ಕಥನ ಬಿರುಮಳೆ ಹೊಡೆದು ನಿಂತು ಹೋದ ಮಲೆನಾಡಿನ ಪರಿಸರವಾಗುತ್ತದೆ. ಚಂದ್ರಯ್ಯಗೌಡರ ಎರಡನೆ ಹೆಂಡತಿಯ ಮಗ ವಾಸು ಹೂವಳ್ಳಿ ಸೀತೆಯ ತಂಗಿ ಲಕ್ಷ್ಮಿಯನ್ನು ಮದುವೆಯಾಗಿ ಕಾನೂರಿನ ಅಧಿಕೃತ ಹೆಗ್ಗಡೆಯಾಗುತ್ತಾನೆ.

ಕುವೆಂಪುರವರು ಹತ್ತೊಂಬತ್ತನೆಯ ಶತಮಾನದ ಅಂತ್ಯ ಮತ್ತು ಇಪ್ಪತ್ತನೆಯ ಶತಮಾನದ ಆದಿಯ ಚರಿತ್ರೆಯನ್ನು ಹೇಳುತ್ತಾ ಸಾಹಿತ್ಯಕೃತಿಯನ್ನು ಅರಗಿಸಿಕೊಳ್ಳುವ ಕ್ರಮ ಮತ್ತು ಅದಕ್ಕೆ ತೋರಿ ರುವ ಪ್ರತಿರೋಧವನ್ನು ಇಲ್ಲಿ ಕಾಣಬಹುದು. ಅವರ ಕಾದಂಬರಿಗಳ ಒಟ್ಟು ಅನುಭವಗಳನ್ನು ಅರ್ಥೈಸ

 P T O

ಲು ಕಂಡುಕೊಂಡಿರುವ ಹೊಸ ವೈಚಾರಿಕತೆ, ಬೌದ್ಧಿಕತೆ, ಚಿಂತನೆಯ ನೆಲೆಯಲ್ಲಿ ಈ ಲೇಖನವನ್ನು ಸಿದ್ಧಗೊಳಿಸಲಾಗಿದೆ) ಇದನ್ನು ನೋಡುವ ಕ್ರಮ ವ್ಯಕ್ತಿಯಿಂದ ವ್ಯಕ್ತಿಗೆ, ಕಾಲದಿಂದ ಕಾಲಕ್ಕೆ ಭಿನ್ನವಾಗಿರಲೂಬಹುದು. ಆದ ಕಾರಣ ವಿದ್ವಾಂಸರ ಅಭಿಪ್ರಾಯಗಳನ್ನು, ಸಂಶೋಧಕರ ಫಲಶ್ರುತಿಗಳನ್ನು ಹೊಗಳುವ ಇಲ್ಲವೇ ತೆಗಳುವ ಅವಶ್ಯಕತೆ ಇಲ್ಲವೆಂದು ತೋರುತ್ತದೆ.

ಕುವೆಂಪುರವರ ಕಾನೂರು ಹೆಗ್ಗಡಿತಿಯನ್ನು ಕುರಿತು ರಾಜೇಂದ್ರ ಚೆನ್ನಿಯವರು ಅಭಿಪ್ರಾಯ ಹೆಚ್ಚು ಅರ್ಥಪೂರ್ಣವಾಗಿದೆ. "ಮಾನವತಾವಾದ ಇಡೀ ಮನುಷ್ಯ ಕುಲದ ಬಗ್ಗೆ ಭಾವುಕವಾದ ಅನುಕಂಪ ತೋರುತ್ತದೆ. ಆದರೆ ಪ್ರತ್ಯೇಕ ವ್ಯಕ್ತಿಗಳನ್ನು ಅವರ ಎಲ್ಲಾ ವಕ್ರತೆಗಳೊಂದಿಗೆ ಅರ್ಥಮಾಡಿ ಕೊಳ್ಳಬೇಕಾದರೆ ವಸ್ತುನಿಷ್ಠ ಪ್ರೇಮದ ಅವಶ್ಯಕತೆಯಿದೆ. ಕುವೆಂಪು ನಮ್ಮ ಸಾಹಿತ್ಯ ಪರಂಪರೆಗೆ ಮುಖ್ಯವಾಗಿರುವುದು ಈ ಕಾರಣಕ್ಕಾಗಿಯೇ. ಅವರ ಶ್ರೀಮಂತ ಕಲಾಸೃಷ್ಟಿ ಮನುಷ್ಯನ ಬಗೆಗಿನ ತೆಳುವಾದ ಮನೋಭಾವಗಳನ್ನು ಕೊಚ್ಚಿಹಾಕುವಂತಹ ಗಾಢಶ್ರದ್ಧೆಯಿಂದ ಕೂಡಿದೆ. ಅವರ ಎಲ್ಲಾ ಪಾತ್ರಗಳೂ ರಕ್ತಮಾಂಸದಿಂದ ಕೂಡಿದ ಮನುಷ್ಯರು. ಯಾವುದೇ ಒಂದು ಧೋರಣೆಯನ್ನು ಸಮರ್ಥಿಸಲು ಸೃಷ್ಟಿಸುವ ಬೊಂಬೆಗಳಲ್ಲ. ಕಾನೂರು ಹೆಗ್ಗಡಿತಿಯ ಕಾದಂಬರಿಕಾರನ ಹೇಳಿಕೆಗಳನ್ನು ಗಮನಿಸಿದರೆ, ಮಾನವೀಯ ಅನನ್ಯತೆಯನ್ನು ದಾಖಲಿಸಲು ಅವರು ವಿಜ್ಞಾನ, ಮನಃಶಾಸ್ತ್ರ, ವರ್ಗ ವರ್ಣಗಳ ತೀವ್ರ ಎಚ್ಚರ ಇವುಗಳನ್ನೆಲ್ಲಾ ಬಳಸಿಕೊಳ್ಳುವುದು ಸ್ಪಷ್ಟವಾಗುತ್ತದೆ"[1]

ಕುವೆಂಪುರವರ ಮಲೆಗಳಲ್ಲಿ ಮದುಮಗಳು ಜಾಗತಿಕಮಟ್ಟದ ಕಥನ ಪರಂಪರೆಗೆ ಸೇರುವ ಕೃತಿಯಾಗಿ ಕಂಡುಬರುತ್ತದೆ. ಆದ ಕಾರಣ ಮದುಮಗಳು ಒಂದು ಮಾನವ ಕೇಂದ್ರಿತ ಹಾಗೂ ವಿಶ್ವ ಕೇಂದ್ರಿತ ಕಾದಂಬರಿಯಾಗಿದೆ. ಮನುಷ್ಯರ ನಡುವಿನ ಸಂಬಂಧಗಳನ್ನು ಕಲೆಯಾಗಿಸುವ ಮತ್ತು ಇತಿಹಾಸವಾಗಿಸುವ ಇವರ ಕಥನ ಪ್ರೀತಿಯನ್ನು ಇಲ್ಲಿ ತಿಳಿಯಬಹುದಾಗಿದೆ.

ದೇವನೂರು ಮಹಾದೇವ ಹೇಳುವ ಹಾಗೆ "ಇದು ಈ ಶತಮಾನದ ಅಂಚಿನಲ್ಲಿ ನಿಂತು ನೋಡಿದರೆ ಕನ್ನಡ ಸಾಹಿತ್ಯ ಪ್ರಕಾರದಲ್ಲಿ. ಕುವೆಂಪುರವರ ಮಲೆಗಳಲ್ಲಿ ಮದುಮಗಳು ಕಾದಂಬರಿಯು ಒಂದು ಶ್ರೇಷ್ಠ ಕೃತಿ. ಮಳೆಗಾಲದಲ್ಲಿ ಈ ಕಾದಂಬರಿಯು ಆರಂಭವಾಗಿ ಸುಗ್ಗಿಯ ಕಾಲಕ್ಕೆ ಮುಗಿಯುತ್ತದೆ. ಇದರ ನಡುವೆ ಅಡಗಿರುವುದು 'ಮಲೆನಾಡಿನ ಮಕ್ಕಳ ಮದುವೆಯ ಸಾಹಸಗಾಥೆ'[2]. ಒಂದು ರೀತಿಯಲ್ಲಿ ಮದುಮಗಳು ಗುತ್ತಿಯ ಸಾಹಸ ಪ್ರಧಾನ ಕಥಾನಕ ಮತ್ತು ಮುಕುಂದಯ್ಯ- ಚಿನ್ನಮ್ಮ, ಪೀಂಚಲು-ಐತ, ಗುತ್ತಿ-ತಿಮ್ಮಿ ಮುಂತಾದ ಹಲವು ಜೋಡಿಗಳ ಪ್ರಣಯ, ಪ್ರೇಮ ಹಾಗೂ ಸಂಘರ್ಷದ ಮಹಾಕಥನ. ಗುತ್ತಿ ತಾನು ಸಾಹಸ ಮುಖಿಯಾಗಿ ತಿಮ್ಮಿಯನ್ನು ಅಪಹರಿಸಿ ಯಶಸ್ಸು ಪಡೆಯುತ್ತಾನೆ. ಮುಕುಂದಯ್ಯನೂ ಕೂಡ ಯಶಸ್ಸು ಪಡೆಯುತ್ತಾನೆ ಎಂದೇ ಹೇಳಬೇಕು. ಆದರೆ ಗುತ್ತಿಯ ಜೀತ

ಪದ್ಧತಿಯಿಂದ ಮುಕ್ತಿಯಿಲ್ಲ. ಮತ್ತೆ ಜೀತಕ್ಕೆ ಅವನು ಕುಳ್ಳಸಣ್ಣ ಎಂದು ಹೆಸರಿಟ್ಟುಕೊಂಡು ಕಾನೂರು ಚಂದ್ರಯ್ಯಗೌಡರ ಮನೆಗೆ ತೆರಳುತ್ತಾನೆ. ಅವನ ಬದುಕಿನ ಇತಿಹಾಸ ಮತ್ತೆ ಮರುಕಳಿಸುತ್ತದೆ. ಓದುಗರಿಗೆ ಈ ಎರಡೂ ಕಾದಂಬರಿಗಳನ್ನು ಪ್ರತ್ಯೇಕವಾಗಿ ಓದುವ ಮತ್ತು ಅವಳಿ ಜವಳಿ ಕಥಾನಕದಂತೆ ಜೊತೆಯಾಗಿ ಓದುವ ಅವಕಾಶ ಲಭಿಸುತ್ತದೆ. ಈ ಎರಡೂ ಕಾದಂಬರಿಗಳೂ ಅಸಂಖ್ಯಾತ ಓದುಗ ವಲಯವನ್ನು ಸೃಷ್ಟಿಸಿಕೊಂಡಿವೆ. ಮತ್ತೆ ಮತ್ತೆ ಓದಿಸಿಕೊಳ್ಳುವ ಅಪರೂಪದ ಗುಣ ಈ ಮಹಾಕೃತಿ ಗಳಿಗಿದೆ. ಪ್ರತೀಸಾರಿ ಓದಿದಾಗಲೂ ಹೊಸ ಅರ್ಥ ಪರಂಪರೆಗಳು ಹುಟ್ಟುತ್ತವೆ. ಇದಕ್ಕೆ ಬಹುಮುಖ್ಯ ಕಾರಣವೆಂದರೆ ಕಾದಂಬರಿಯೊಳಗಿನ ಭಾಷೆ, ಬಲಿಷ್ಠ ವಸ್ತು, ಪರಿಸರ, ನಿರೂಪಣೆಯ ಸ್ವಚ್ಛಂದತೆ, ವೈಭವೀಕರಣ ಇಲ್ಲದಿರುವಿಕೆ ಮುಂತಾದವು. ಈ ಕಾದಂಬರಿಗಳಲ್ಲಿ ಬರುವ ಪ್ರತಿಯೊಂದು ಅಧ್ಯಾ ಯವೂ ಒಂದು ಪ್ರತ್ಯೇಕವಾದ ಕಥನದ ಗುಣವನ್ನು ಹೊಂದಿದೆ. ಒಂದೊಂದು ವಾಕ್ಯ ಪದ ವರ್ಣನೆ ಯು ವಿಶೇಷ ಅರ್ಥಗಳನ್ನು ಒಡಮೂಡಿಸುತ್ತದೆ.

ಕುವೆಂಪು ಕಾದಂಬರಿಗಳಲ್ಲಿ ಕಂಡು ಬರುವ ಪಾತ್ರಗಳನ್ನು ಕುರಿತು ಹೇಳುವುದಾದರೆ ಕುವೆಂಪು ಎಲ್ಲಾ ವರ್ಗ ಪಾತ್ರಗಳಿಗೆ ಮಾನ್ಯತೆಯನ್ನು ನೀಡುತ್ತಾರೆ. ಮೇಲ್ವರ್ಗ, ಕೆಳವರ್ಗ, ಶೂದ್ರರು, ಮುಸ್ಲಿಮರು ಹೀಗೆ ಅನೇಕಾನೇಕ ವರ್ಗಾಂತರಗಳ ಪಾತ್ರ ಸೃಷ್ಟಿಯಿದೆ. ಅಲ್ಲಿ ವಯೋವೃದ್ಧರಿಂದ ಹಿಡಿದು ತೊಟ್ಟಿಲಿನ ಹಸುಗೂಸಿನವರೆಗು ಪಾತ್ರ ಸೃಷ್ಟಿಯ ಕೌಶಲ್ಯವಿದೆ. ಕುವೆಂಪು ಈ ಕಾದಂಬರಿಗಳ ಸಂವಿಧಾನವನ್ನು ಅರಿ ಯುವ ಓದುವ ಮಾದರಿಯನ್ನು ಅರಿಕೆ ಮಾಡುತ್ತಾ "ಇಲ್ಲಿ ಯಾರು ಮುಖ್ಯರಲ್ಲ. ಯಾರೂ ಅಮುಖ್ಯ ರಲ್ಲ. ಯಾವುದೂ ಯಕಶ್ಚಿತವಲ್ಲ. ಇಲ್ಲಿ ಯಾವುದಕ್ಕೂ ಮೊದಲಿಲ್ಲ. ಯಾವುದಕ್ಕೂ ಕೊನೆಯಿಲ್ಲ. ಯಾವುದೂ ಎಲ್ಲಿಯೂ ನಿಲ್ಲುವುದಿಲ್ಲ. ಎಲ್ಲಕ್ಕೂ ಇದೆ ಅರ್ಥ. ಯಾವುದೂ ಅಲ್ಲ ವ್ಯರ್ಥ"[6] ಎಂದಿರುವ ಮಾತು ಅರ್ಥಪೂರ್ಣವಾಗಿದೆ.

"ಸನ್ನಿವೇಶಗಳನ್ನು ಕಲ್ಪಿಸಿಕೊಡುವಾಗ, ದೃಶ್ಯಗಳನ್ನು ಚಿತ್ರಿಸುವಾಗ, ವ್ಯಕ್ತಿಗಳನ್ನು ಪರಿಚಯಿಸುವಾಗ, ಅವರ ಸಂಭಾಷಣೆಗಳನ್ನು ಅವರವರ ಬೇರೆ ಬೇರೆಯ ವಾಣಿಗಳೊಡನೆ ಆಲಿಸು ವಾಗ ವಾಚಕರು ಸಿನಿಮಾ ವ್ಯಕ್ತಿತ್ವವನ್ನು ತತ್ಪರತೆಯಿಂದ ನೋಡುತ್ತಿರುವ ಪ್ರೇಕ್ಷಕರಂತಾಗುತ್ತಾರೆ"[7] ಎಂಬ ಲೇಖಕರ ಅರಿಕೆ ಮಾತುಗಳು ಇಡೀ ಕಥನದ ಸಾರವನ್ನು ತಿಳಿಸುತ್ತವೆ.

ಮೊದಲನೆಯ ಸಾರಿ ಓದಿದೊಡನೆ ಎಲ್ಲವನ್ನೂ ಪೂರೈಸಿದೆವು ಎಂದುಕೊಂಡರೆ ಒಂದು ಬೀದಿ ಯಲ್ಲಿ ಹೊಕ್ಕು ಇನ್ನೊಂದು ಬೀದಿಯಿಂದ ಹೊರಬಂದು ನಗರವನ್ನೆಲ್ಲಾ ಸುತ್ತಿಬಂದೆ ಎಂದಂತಾಗುತ್ತದೆ. ಆದುದರಿಂದ ಕಥೆಯ ವಸ್ತು ಚಿತ್ರಣ ಪರಿಸರ ಪಾತ್ರಗಳು ಎಲ್ಲವನ್ನು ಸಮಷ್ಟಿ ದೃಷ್ಟಿಯಿಂದ ಅವ ಲೋಕಿಸಿದಾಗ ಮಾತ್ರ ಕಾದಂಬರಿ ನಿಜವಾದ ಕರತಲ ರಂಗಭೂಮಿ ಆಗುತ್ತದೆ.

**ಕೊನೆ ಟಿಪ್ಪಣಿಗಳು**

ಅ) ರಾಜೇಂದ್ರ ಚೆನ್ನಿ, ಅಧ್ಯಯನ, ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ ೧೯೮೨ ಪುಟ ೫೮

ಆ) ದೇವನೂರು ಮಹಾದೇವ, ಮಲೆಗಳಲ್ಲಿ ಮದುಮಗಳು ಈ ಶತಮಾನದ ಶ್ರೇಷ್ಠ ಕಾದಂಬರಿ, ಪ್ರಜಾವಾಣಿ ದಿನಪತ್ರಿಕೆ, ಮಾರ್ಚ್ ೫. ೧೯೯೯, ಬೆಂಗಳೂರು.

ಇ) ಕುವೆಂಪು, ಮಲೆಗಳಲ್ಲಿ ಮದುಮಗಳು 'ಓದುಗರಿಗೆ', ಉದಯರವಿ ಪ್ರಕಾಶನ, ೧೯೯೭

ಈ) ಕುವೆಂಪು, ಕಾನೂರು ಹೆಗ್ಗಡಿತಿ 'ಅರಿಕೆ', ಉದಯರವಿ ಪ್ರಕಾಶನ, ಮೈಸೂರು, ೨೦೦೪

# ಪರಾಮರ್ಶನ ಗ್ರಂಥಗಳು


೧) ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೨೦೦೪

೨) ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೭

೩) ಡಾ. ಉದ್ದಂಡಯ್ಯ, ಕುವೆಂಪು ಕಥನ, ಅಧ್ಯಯನಮಂಡಲ, ಬಸವನಗುಡಿ, ಬೆಂಗಳೂರು ೨೦೦೯

೪) ಸಂ. ಡಾ. ಚಕ್ಕೆರೆ ಶಿವಶಂಕರ್ ಸಹ್ಯಾದ್ರಿಯ ಸೂರ್ಯ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜ ಪೇಟೆ, ಬೆಂಗಳೂರು, ೨೦೧೦

೫) ಡಾ. ಕೆ. ವಿ. ಚಂದ್ರಣ್ಣಗೌಡ, ವಿಚಾರವೀಳ್ಯ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು ೧೯೯೨-೯೩

೬) ಕುವೆಂಪು, ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ, ಉದಯರವಿ ಪ್ರಕಾಶನ, ಮೈಸೂರು, ೧೯೮೬

೭) ಕುವೆಂಪು, ನನ್ನ ದೇವರು ಮತ್ತು ಇತರ ಕಥೆಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೭

೮) ಕುವೆಂಪು, ವಿಚಾರಕ್ರಾಂತಿಗೆ ಆಹ್ವಾನ, ಉದಯರವಿ ಪ್ರಕಾಶನ, ಮೈಸೂರು, ೧೯೯೮

೯) ಡಿ.ಆರ್. ನಾಗರಾಜ್, ಅಮೃತ ಮತ್ತು ಗರುಡ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೦

೧೦) ಕೆ.ಸಿ.ಶಿವಾರೆಡ್ಡಿ, ಕನ್ನಡದ ಹಾಡು-ಪಾಡು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೧೧) ಕುವೆಂಪು, ಶೂದ್ರತಪಸ್ವಿ, ಉದಯರವಿ ಪ್ರಕಾಶನ, ಮೈಸೂರು, ೨೦೦೮

೧೨) ಕುವೆಂಪು,ಜಲಗಾರ, ಉದಯರವಿ ಪ್ರಕಾಶನ, ಮೈಸೂರು, ೨೦೦೮

